

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೯ ಜನವರಿ ೨೦೧೩ ಸಂಚಿಕೆ : ೦೧

ಸಂಕ್ರಮಣ ಸಂಚಿಕೆ



ಲಿಂ. ಶ್ರೀ ಅಟವೀ ಸ್ವಾಮಿಗಳು



ಸಂಕ್ರಾಂತಿ ಹಬ್ಬದ
ಹಾರ್ದಿಕ ಶುಭಾಶಯಗಳು



ಲಿಂ. ಶ್ರೀ ಉದ್ದಾನ ಶಿವಯೋಗಿಗಳು

ಡಿಸೆಂಬರ್ ೨೩, ೨೦೧೨ ರಂದು ಶ್ರೀಮಠದಲ್ಲಿ ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೫೮ನೇ ವಾರ್ಷಿಕ ಮಹಾಧಿವೇಶನವನ್ನು ಪರಮಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ, ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೯ ಜನವರಿ ೨೦೧೩ ಸಂಚಿಕೆ : ೧


## ಒಳಪುಟಗಳಲ್ಲಿ ....................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦





## ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ 58ನೆಯ ಮಹಾಧಿವೇಶನ

ಆತ್ಮೀಯರೇ, ನಮಸ್ಕಾರ–

'ನೀವೆಲ್ಲ ಬಂದಿರುವುದು ವರದಿಗಳನ್ನು ಕೇಳುವುದಕ್ಕಾಗಲೀ ಮುಖ್ಯಭಾಷಣಗಳನ್ನು ಆಲಿಸುವುದಕ್ಕಾಗಲೀ, ಪ್ರಶಸ್ತಿಗಳ ಪ್ರದಾನವನ್ನು ಗಮನಿಸುವುದಕ್ಕಾಗಲೀ ಅಲ್ಲವೆಂಬುದು ನಮಗೆ ಗೊತ್ತಿದೆ. ನೀವು ಬಂದಿರುವುದು, ಇಲ್ಲಿ ಕುಳಿತಿರುವುದು ನಮ್ಮ ಪರಮಪೂಜ್ಯ ಗುರುವರೇಣ್ಯರ ದರ್ಶನಕ್ಕಾಗಿ, ಪೂಜ್ಯರ ಆಶೀರ್ವಚನವನ್ನು ಕೇಳುವುದಕ್ಕಾಗಿ ಎಂಬುದು ನಮಗೆ ತಿಳಿದಿದೆ. ಪರಮಪೂಜ್ಯರಿಗೂ ನಿಮ್ಮನ್ನೆಲ್ಲಾ ನೋಡುವ, ನಿಮ್ಮ ಕ್ಷೇಮಭಾಗ್ಯವನ್ನು ತಿಳಿದುಕೊಳ್ಳ ಬೇಕೆಂಬ ಆಶೆ. ನೀವು ಶ್ರೀಮಠದ ಅನನ್ಯ ಸಂಪತ್ತು. ಪರಮಭಾಗ್ಯ'– ಎಂಬುದಾಗಿ ಶ್ರೀಮಠದ **ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ 58ನೆಯ ಮಹಾಧಿವೇಶನ 23-12-2012**ರಂದು ಶ್ರೀಮಠದ ಗೋಸಲ ಸಿದ್ದೇಶ್ವರ ವೇದಿಕೆಯ ಆವರಣದಲ್ಲಿ ಸಮಾವೇಶಗೊಂಡಾಗ ಅಧ್ಯಕ್ಷರಾದ **ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು** ವ್ಯಕ್ತಪಡಿಸಿದ ಮನದಾಳದ ಮೆಚ್ಚುಗೆಯ ನುಡಿಗಳು.

ಶ್ರೀಮಠ ಕರ್ನಾಟಕದ ಎಲ್ಲ ಮಠಗಳಿಗಿಂತ ಭಿನ್ನವಾದುದು, ವಿಶಿಷ್ಟವಾದುದು. ಪಂಚಶಕ್ತಿಗಳ ತಪೋಭೂಮಿ. ಅಗ್ನಿ, ತೀರ್ಥ, ಯಂತ್ರಧಾರಣೆ, ಹಳೇಮಠದ ಪವಿತ್ರ ಪರಂಪರೆ, ಸ್ವಾಮಿಗಳ ಕಾಯಕನಿಷ್ಠೆಗಳ ಮೂರ್ತರೂಪ. ಇಲ್ಲಿ ಲಿಂಗದೀಕ್ಷೆಯನ್ನಲ್ಲ ಕೊಡುವುದು, ಕಾಯಕದೀಕ್ಷೆಯನ್ನು ಎಂದರು– ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿಯನ್ನು ಸ್ವೀಕರಿಸಿದ ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪನವರು.

ಶ್ರೀಮಠ ಜಾತ್ಯಾತೀತ ತತ್ವಾಧಾರಿತ ಮಠ. ಮಾತೃಪ್ರೀತಿಯನ್ನು ಮಕ್ಕಳಿಗೆ ಉಣಿಸುತ್ತಿರುವ ಮಠ. ರಿಯಾಜ್ ಎಂಬ ಮುಸ್ಲಿಂ ಬಂಧುವನ್ನು ವಿಮಾನ ಪ್ರಯಾಣದಲ್ಲಿ ಪರಿಚಿತನಾದ ಸಂದರ್ಭದಲ್ಲಿ ನೀವೇಕೆ ಶ್ರೀ ಸಿದ್ಧಗಂಗಾಮಠಕ್ಕೆ ಸೋಲಾರ್ ವಿದ್ಯುತ್‌ಶಕ್ತಿಯನ್ನು ವ್ಯವಸ್ಥೆ ಮಾಡಿಕೊಡಬಾರದು ಎಂದಾಗ, ಡಾಕ್ಟರೇ ಅದು ನನ್ನ ಪುಣ್ಯ. ನಾನು ಅಲ್ಲಿಯೇ ಓದಿದವನು ಎಂದಾಗ ನನಗಾದ ಆನಂದ ಹೇಳತೀರದು– ಎಂದವರು ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿಯನ್ನು ಸ್ವೀಕರಿಸಿದ ಇನ್ನೊಬ್ಬ ಅಭಿಮಾನಿಗಳು ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ– ಹೃದ್ರೋಗ ತಜ್ಞೆ, ಬೆಂಗಳೂರು ಅವರು.

ಸಮಾವೇಶದಲ್ಲಿ **'ಯುಗಾವತಾರಿ ಬಸವದರ್ಶನ'** ಮಹಾಕಾವ್ಯ, ಡಾ॥ ಪ್ರದೀಪ್‌ಕುಮಾರ್ ಹೆಬ್ರಿ ವಿರಚಿತ, **'ಎಲೆಮರೆಯ ಮಲ್ಲಿಗೆ'** ಶ್ರೀಮಠದ ಹಳೆಯ ವಿದ್ಯಾರ್ಥಿ ಶ್ರೀ ಬಿ.ಕೆ. ಲಿಂಗಯ್ಯನವರನ್ನು ಕುರಿತ ಅಭಿನಂದನ ಕೃತಿ, **'ನೂರೆಂಟು ನಾಯಿ ಬೊಗಳಿದರೇನು'**–ಒಡಿಕಪ್ಪತಾತನವರ ತತ್ವಪದ ಸಂಗ್ರಹ– ಹಾಗೂ ಪ್ರೊ. ಸಿ.ಬಿ. ತಿಲಕರಾಗಿ ವಿರಚಿತ, ಹಳೆಯ ವಿದ್ಯಾರ್ಥಿ ಶ್ರೀ ಹೂಜೇನಗಲ್ಲಿ ಗುಜ್ಜಪ್ಪನವರು ಬರೆದ **'ಜ್ಞಾನಜ್ಯೋತಿ'** ಕೃತಿಗಳನ್ನು ಬಿಡುಗಡೆ ಮಾಡಲಾಯಿತು.

'ಸಂಘಸಿರಿ' ಪ್ರಶಸ್ತಿಯನ್ನು ವಿದ್ವಾನ್ ಎಲ್. ವಿರೂಪಾಕ್ಷಯ್ಯ, ವಿದ್ವಾನ್ ಎಂ. ಮಲ್ಲವೀರಯ್ಯ, ವಿದ್ವಾನ್ ಬಿ.ಕೆ. ಲಿಂಗಯ್ಯ ಮತ್ತು ವಿದ್ವಾನ್ ಹೆಚ್.ಟಿ. ಲಿಂಗಯ್ಯ ಅವರುಗಳಿಗೆ ಕೊಟ್ಟು ಗೌರವಿಸಲಾಯಿತು.

ಶ್ರೀ ಸಂಘ ಸೇವೆಯನ್ನು ಮಾಡುವುದರಲ್ಲಿಯೇ ಸಂತೋಷವನ್ನು ಕಾಣುವುದಾಗಿದೆ. ಒಬ್ಬೊಬ್ಬ ಹಳೆಯ ವಿದ್ಯಾರ್ಥಿಯಲ್ಲಿಯೂ ಶ್ರೀಮಠ ನೀಡಿರುವ ಶೀಲ, ಸಂಸ್ಕಾರವನ್ನು ಕಾಣಬಹುದಾಗಿದೆ ಎಂದು ಹಿರಿಯರೊಬ್ಬರು ಹೇಳುತ್ತಿದ್ದುದನ್ನು ಕೇಳಿಸಿಕೊಂಡಾಗ ಹೃದಯ ತುಂಬಿ ಬಂದಿತು.

***2012**ನ್ನು ದಾಟಿ **2013**ಕ್ಕೆ 'ಸಿದ್ಧಗಂಗಾ' ಮುನ್ನಡೆಯುತ್ತಿದೆ. ನಿಮ್ಮೆಲ್ಲರ ಸಹಕಾರ ಸಹಾಯಗಳು ನಿರಂತರವಾಗಿರಲಿ ಎಂದು ಆಶಿಸುತ್ತದೆ.*

–ಸಂಪಾದಕ









## ಶಿಕ್ಷಕರು-ಅಂದು

**ನ**ಮಗೆ ಬೋಧಿಸಿದ ಶಿಕ್ಷಕರು ತುಂಬು ಅಧ್ಯಯನಶೀಲರಾಗಿದ್ದರು. ಆಗಿನವರ ಪರಂಪರೆಯೇ ಅಂತಹುದು. ವಿನಯ ಅವರ ಮೊದಲ ಗುಣವಾಗಿದ್ದರೆ ವಿದ್ವತ್ತು ಎರಡನೆಯದಾಗಿದ್ದಿತು. ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದವರೂ ಪೂರ್ವ ಸಿದ್ಧತೆಯಿಲ್ಲದೆ ತರಗತಿಗೆ ಬರುತ್ತಿರಲಿಲ್ಲ. ನಮಗಿಟ್ಟಿದ್ದ ಪಠ್ಯಪುಸ್ತಕಗಳಲ್ಲಿನ ಪದ್ಯಗಳನ್ನು ಸುಶ್ರಾವ್ಯವಾಗಿ ಹಾಡಿ ಕಲಿಸುತ್ತಿದ್ದರು. ಸಂಜೆಯ ವೇಳೆ ಗ್ರಾಮದ ದೇವಾಲಯಗಳಲ್ಲಿ ಅಥವಾ ಮುಖಂಡರ ಮನೆಗಳ ಜಗಲಿಯ ಮೇಲೆ ಕುಳಿತು ಲಾಂದ್ರದ ಬೆಳಕಿನಲ್ಲಿ ಕುಮಾರವ್ಯಾಸ ಭಾರತದ ವಾಚನವನ್ನು ಅಥವಾ ಜೈಮಿನಿ ಭಾರತದ ವಾಚನವನ್ನು, ಪ್ರಭುಲಿಂಗಲೀಲೆ, ಬಸವಪುರಾಣ, ಶನಿಮಹಾತ್ಮೆ, ದೇವಿ ಪುರಾಣಗಳ ವಾಚನವನ್ನು ಮಾಡುತ್ತಿದ್ದರು. ಗ್ರಾಮಗಳಲ್ಲಿ ವ್ಯಾಜ್ಯಗಳು ನಡೆದು ಪಂಚಾಯಿತಿ ಕಲೆತಾಗ ಅದರಲ್ಲಿ ಭಾಗವಹಿಸಿ ನ್ಯಾಯತೀರ್ಮಾನ ಮಾಡುವವರೂ ಆಗಿದ್ದರು. ಮಹಾನವಮಿ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನು ಕರೆದುಕೊಂಡು ಊರಿನಲ್ಲಿ ಸಂಚರಿಸುತ್ತ ಮನೆಮನೆಯ ಮುಂದೆ ನಿಂತು ಮಾನೌಮಿ ಪದಗಳನ್ನು ಹಾಡಿಸುತ್ತ, ತಿಂಡಿ ತಿನಿಸು ಕೊಡಿಸುತ್ತಿದರು. ಗ್ರಾಮದಲ್ಲಿನ ಅನಕ್ಷರಸ್ಥರಿಗೆ ಕಾಗದಗಳನ್ನು ಬರೆದುಕೊಡುವ ಸೇವೆ ಅವರದಾಗಿತ್ತು. ಶಿಕ್ಷಕರು ಮನೆಗೆ ಬಂದರೆ ಅವರಿಗೆ ಕಂಬಳಿ ಅಥವಾ ಚಾಪೆ ಹಾಸಿ ಕುಳಿತುಕೊಳ್ಳುವ ಗೌರವ ಕೊಡುವ ಸಂಪ್ರದಾಯವಿತ್ತು. ಆಗಿದ್ದರು ಅಂದಿನ ಶಿಕ್ಷಕರು. ಶಿಕ್ಷಕ ಜ್ಞಾನ ನೀಡುವ ದೀಪವಾಗಿ, ನ್ಯಾಯ ಕೊಡುವ ನ್ಯಾಯಾಧೀಶನಾಗಿ, ಕಾವ್ಯ ವಾಚನಗಳ ಮುಖಾಂತರ ಗ್ರಾಮೀಣರನ್ನು ವಿದ್ಯಾವಂತರನ್ನಾಗಿ, ಕಥೆಗಳನ್ನು ಹೇಳುವುದರ ಮೂಲಕ ಮಕ್ಕಳನ್ನು ನೀತಿವಂತರನ್ನಾಗಿಸುವ ಕಥೆಗಾರರಾಗಿ, ಸಣ್ಣಪುಟ್ಟ ರೋಗಗಳಿಗೆ ಸೂಕ್ತ ಔಷಧೋಪಚಾರ ಮಾಡುವ ವೈದ್ಯರಾಗಿ, ಗ್ರಾಮಜೀವನದ ಆರಾಧ್ಯಮೂರ್ತಿಯಾಗಿ ಇರುತ್ತಿದ್ದರು. ಆದರೆ ಇಂದಿನ ಶಿಕ್ಷಕರು?.

❖

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಕಾಯವೆಂಬ ವನಿತೆಗೆ ಆತ್ಮನೆಂಬ ಪುರುಷ ನೋಡಾ*
*ಈ ದೇಹದ ಆತ್ಮನ ಸಂಪರ್ಕದಿಂದ ಹುಟ್ಟಿದ*
*ಸಕಲೇಂದ್ರಿಯಗಳೆ ಮಕ್ಕಳು ನೋಡಾ*
*ಇದೇ ಸಂಸಾರವೆಂಬುದನರಿಯದೆ*
*ಬಹಿರಂಗದಲ್ಲಿ, ನಾನು ಹೊನ್ನು ಹೆಣ್ಣು ಬಿಟ್ಟು*
*ವಿರಕ್ತನಾದೆನೆಂಬ ಅಜ್ಞಾನಿಯ ನೋಡಾ*
*ಇದು ವಿರಕ್ತಿಯೇ ಅಲ್ಲ*
*ದೇಹೇಂದ್ರಿಯ ಮನಪ್ರಾಣಾದಿಗಳ*
*ಮಹದಲ್ಲಿ ಒಡಗೂಡಿದಾತನೆ ಪರಮವಿರಕ್ತನು*
*ಆತಂಗೆ ನಮೋ ನಮೋ ಯೆಂದೆನು ಕಾಣಾ!*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಇದೊಂದು ಸುಂದರ ವಚನ. ಸುಂದರ ಉಪಮಾಲಂಕಾರಗಳಿಂದ ಕೂಡಿದೆ. ಕಾಯ ಮತ್ತು ಆತ್ಮವನ್ನು ಹೆಣ್ಣು ಗಂಡಿಗೆ ಹೋಲಿಸಿ ಸಕಲೇಂದ್ರಿಯಗಳನ್ನು ಇವುಗಳ ಮಕ್ಕಳೆಂದು, ಇವುಗಳ ಮುಖಾಂತರ ದೇಹದಲ್ಲಿ ನಡೆಯುವ ವ್ಯಾಪಾರಗಳನ್ನು ಅಂತರಂಗ ಸಂಸಾರದೊಂದಿಗೆ ಹೋಲಿಸಲಾಗಿದೆ. ಇಂದ್ರಿಯಗಳ ವ್ಯಾಪಾರಗಳೇ ಬಹಿರಂಗ ಸಂಸಾರದ ಚಟುವಟಿಕೆಗಳನ್ನು ರೂಪಿಸುತ್ತವೆ. ಈ ಪಂಚೇಂದ್ರಿಯಗಳು ಪರಿಶುದ್ಧವಾಗಿದ್ದು ಊರ್ಧ್ವಮುಖಿವಾಗಿದ್ದರೆ ಮಾತ್ರ ಬಹಿರಂಗ ಸಂಸಾರವಾಗುತ್ತದೆ.

ಕಣ್ಣಿನಲ್ಲಿ ಕಾಮ, ಮನದಲ್ಲಿ ಕ್ರೋಧ, ಪ್ರಾಣದಲ್ಲಿ ಲೋಭ, ಬುದ್ಧಿಯಲ್ಲಿ ಮತ್ಸರ, ಇರುವುದು ಮನಸ್ಸಿನಿಂದುಂಟಾಗುವ ಅರುಹಿನಲ್ಲಿ ಮಾಯೆ ಇದ್ದಾಗ, ಮನಸ್ಸೇ ತನುವೆಂಬ ರಾಜ್ಯಕ್ಕೆ ಅರಸು. ಇದರ ಆಜ್ಞೆಯ ಪ್ರಕಾರವೇ ಇಂದ್ರಿಯ ವ್ಯಾಪಾರಗಳೆಲ್ಲವೂ ನಡೆಯುತ್ತವೆ.

(ಕೃಪೆ: ಶರಣತತ್ವ ಚಿಂತನೆ- ಭಾಗ-1- ಪ್ರೊ. ಬಿ. ವಿರೂಪಾಕ್ಷಪ್ಪ -ಬಸವ ಸಮಿತಿ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು.)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಾತು ಮನಂಗಳಿಗೆ ನಿಲುಕದ ದಾಸೋಹ
ಮಣಿಹವ ನಡೆಸಿರುವ ಶಿವಮಹಿಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಚನ ರಚನೆಯ ಒಳಗ ನಾನೇನು ಬಲ್ಲೆನು
ಅಚಲಮನ ನಿರ್ಮಲ ಮಮಗುರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಸುಖಸಿರಿವಂತ ದಾಸೋಹ ಧೀಮಂತ
ಗುರುಕುಲದ ಗುಣವಂತ ತಾನಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸುಜ್ಞಾನ ಭರಿತನೆ ಸುವಿಚಾರ ಚರಿತನೆ
ಸೌಶೀಲ ಸುಪ್ರಿಯ ಘನತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಕಳ ನಿಷ್ಕಳ ಚೆಲುವೆ ವಿಮಲ ನಿರ್ಮಲ ಚೆಲುವೆ
ನಾದ ಸುನಾದ ಶಿವಚೆಲುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರು ನಿಮ್ಮ ಚರಣವನರಿಯನಾಗಿರುವೆನು
ಹರ ನಿಮ್ಮ ಚರಣವನರಿಯೆನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜವನೆ ಬೆಳಗುತಿಹ ನಿಶ್ಚಿಂತ ಶರಣನೆ
ನಿಜವೆ ಮೈತಳೆದಿರುವ ಶಿವಶರಣ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಗಡಣಕೆ ನಿಲುಕದ ಜಡಮತಿಗೆ ಸಿಲುಕದ
ಒಡಲಾಡಂಬರಕೆ ದೂರಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಂಜಲದ ಮಾತಾಡಿ ರಂಜಿಪರ ನೀನೊಲ್ಲೆ
ಅಂಜದೆ ಅಳುಕದೆ ನುಡಿವರ ಒಡೆಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಣ್ಣ ಬಸವಣ್ಣನ ಶಾಸ್ತ್ರಿಗಳು ಶ್ರೋತ್ರಿಯರು
ಅರಿಯದಾದರೆಂದು ಸಾರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಕಾಯಕಯೋಗ-ಪ್ರಸನ್ನತಾ ಪ್ರಸಾದ

-ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಸತ್ಯ ವಸ್ತುವಿನ ಜ್ಞಾನಸಾಧನೆಯಿಂದ, ಏಕಾಗ್ರತಾರೂಪ ಧ್ಯಾನಸಾಧನೆಯಿಂದ, ಹೃದಯದ ಮಾಧುರ್ಯರೂಪ ಭಕ್ತಿ ಸಾಧನೆಯಿಂದ ಭಗವಚ್ಚಿಂತನ ಮಾಡುವುದನ್ನು ನಾವೀಗಾಗಲೆ ನೋಡಿದ್ದೇವೆ. ಭಗವಂತನನ್ನು ನಿರ್ಮಲಮತಿಯಲ್ಲಿ, ನಿಶ್ಚಲ ಮನಸ್ಸಿನಲ್ಲಿ ಹಾಗೂ ಮಧುರ ಹೃದಯದಲ್ಲಿ ಆವಿಷ್ಕರಿಸಿಕೊಳ್ಳುವುದು ಚಿಂತನ.

ಜ್ಞಾನ ಧ್ಯಾನ ಹಾಗೂ ಭಕ್ತಿಗೆ ಹೊರತಾಗಿ ಇನ್ನೊಂದು ಅತ್ಯಮೂಲ್ಯ ಸಾಧನೆಯಿದೆ. ಅದುವೇ 'ಕರ್ಮ!' ಮನ-ಬುದ್ಧಿಗಳ ಬಲವಿಡಿದು ಮಾಡಲಾಗುವ ದೈಹಿಕ ಕಾರ್ಯ ಕರ್ಮವಿದು ಬದುಕಿನ ಪ್ರಧಾನಾಂಶ. ಯೋಗಿಯೇ ಇರಲಿ ರಾಗಿಯೇ ಇರಲಿ, ಕರ್ಮವಿರದಿರಲಾಗದು. 'ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್'-ಹೀಗೆ ಹೇಳಿದೆ ಗೀತೆ. ಯಾರು ಯಾವುದೂ ಕರ್ಮವಿಲ್ಲದೆ ಒಂದು ಕ್ಷಣ ಕೂಡ ಬಾಳರು. ಮನುಷ್ಯ ಪಶುಪಕ್ಷಿಯಷ್ಟೇ ಅಲ್ಲ ದೇವನು ಕೂಡ ಕರ್ಮರತ.

***ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ***

'ಅರ್ಜುನ, ನನಗೇನಿದೆ ಹೇಳು ಕರ್ತವ್ಯ? ಮೂರು ಲೋಕಗಳಲ್ಲಿ ನಾನು ಪಡೆಯಬೇಕಾದ ಅಥವಾ ಪಡೆಯದಿರುವ ವಸ್ತುವಿಲ್ಲ. ನಾನು ಏನನ್ನೂ ಬಯಸುವುದಿಲ್ಲ. ಎಲ್ಲವೂ ನಾನಾಗಿರುವಾಗ, ನನ್ನದಾಗಿರುವಾಗ ಬಯಸುವುದಾದರೂ ಏನನ್ನು! ನಾನು ನಿತ್ಯಪೂರ್ಣ! ತುಂಬಿದ ಸಾಗರ! ಹೀಗಿದ್ದೂ ನಾನು ಕರ್ಮ ಮಾಡುತ್ತೇನೆ!' ಇದು ಗೀತೆಯ ಅಮರ ನುಡಿ.

ನಿಜವಾಗಿ ದೇವನಲ್ಲಿ ಆಸೆಗಳಿರವು, ಎಂದಿಗೂ. ಆದರೆ, ಅಚ್ಚರಿ ಎಂದರೆ ದೇವನಲ್ಲೂ ಇಚ್ಛೆಗಳನ್ನು ಆರೋಪಿಸುತ್ತೇವೆ.

ದೇವನು ನಮ್ಮ ಅನ್ನ, ವಸ್ತ್ರ, ಒಡವೆ, ವೈಭವ ಏನೆಲ್ಲಾ ಕೇಳುತ್ತಾನೆ. ಕೊಟ್ಟರೆ ಸಂತುಷ್ಟ, ಕೊಡದಿದ್ದರೆ ಸಂಕಷ್ಟಗಳ ತರುತ್ತಾನೆ. ಹೀಗೆಲ್ಲ ಭಾವಿಸುತ್ತೇವೆ. ಪಂಚಗವ್ಯಗಳ ಸ್ನಾನವಿಕ್ಕಿ, ವಸ್ತ್ರ ಉಡಿಸಿ ಹೂ ಮುಡಿಸಿ ದೀಪ ಎತ್ತುತ್ತೇವೆ. ಅದು ತಮ್ಮ ಆನಂದಕ್ಕಾಗಿ ಮಾತ್ರ. ಅವನಿಗೆ ಆ ದೀಪ ಏನು? ಸೂರ್ಯ ಚಂದ್ರ ನಕ್ಷತ್ರಗಳು ಆತ ಹಚ್ಚಿದ ನಂದಾದೀವಿಗೆಗಳು! ನಮ್ಮ ಎಣ್ಣೆಯ ಮಿಣುಕು ದೀಪ ಅವನಿಗೆ ಏನು ಅವಶ್ಯ? 'ಅವನಿರುವಲ್ಲಿ ಕತ್ತಲೆ ಇದ್ದರೆ ದೀಪದ ಅಗತ್ಯ ಆದರೆ ಆತ ಸೂರ್ಯಕೋಟಿ ಸಮಪ್ರಭ! ಇನ್ನು ಆಹಾರ, ನೈವೇದ್ಯ. ಹಸಿದವರಿಗೆ ಅನ್ನ. ದೇವನು ಹಸಿಯುತ್ತಾನೆಯೆ ಪೂರ್ಣಕಾಮನಾದ ಆತನೇ ಹಸಿದರೆ ತೃಪ್ತಿಪಡಿಸುವವರಾರು ವೃಕ್ಷದ ಮಡಿ ಹಸಿದರೆ ನೀರುಣಿಸಬಹುದು. ಸಾಗರವೇ ನೀರಡಿಸಿದರೆ? ಇಲ್ಲ. ದೇವನಿಗೆ ಏನೂ ಬೇಕಿಲ್ಲ. ಅಂದ ಬಳಿಕ 'ಕರ್ತವ್ಯ'ವೆಂಬ ಕರ್ಮ ಹೇಗಿರಲು ಸಾಧ್ಯ? ಹಾಗಾದರೆ ದೇವನು ಅದೇಕೆ ಕರ್ಮಗಳಲ್ಲಿ ರತ? **'ಉತ್ಸೀದೇಯುಃ ಇಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಮ್'**. ಆತ ಕರ್ಮ ಮಾಡದಿದ್ದರೆ ಲೋಕಗಳೆಲ್ಲ ವಿನಷ್ಟವಾಗುವುವು. ಭೂಮ್ಯಾದಿ ಪಂಚಭೂತಾತ್ಮಕ ಸಮಸ್ತ ವಿಶ್ವವೇ ಮರೆಯಾಗುವುದು.

ತೆರೆಗಳ ಬಾಳು ಸಾಗರದ ಮೇಲೆ. ಸಾಗರವೇ ಇಲ್ಲದಿರೆ! ವಿಶ್ವದ ಅಸ್ತಿತ್ವ, ತೋರಿಕೆ-ದೇವನ ಸಂಕಲ್ಪ ಕರ್ಮದ ಮೇಲೆ! ಅವನ ಜ್ಞಾನ ತಪಸ್ಸಿನ ಮೇಲೆ! ಅದು ಪ್ರತಿಕ್ಷಣ ಸಾಗುತ್ತಲಿದೆ. ಹೀಗಿರುವಾಗ 'ಅಕರ್ಮಕೃತ್' ಇರಲು ಆಗದು ಯಾರಿಗೂ. ನಾವು ಕರ್ಮವನ್ನು ತಿರಸ್ಕರಿಸಿ ಜ್ಞಾನವನ್ನು ಅದೆಷ್ಟೇ ಪುರಸ್ಕರಿಸಿದರೂ ಕರ್ಮವಿಲ್ಲದೆ ಬದುಕು ಸಾಗದು, ಇಷ್ಟೇ. ಕೆಲವರ ಕರ್ಮ ಸೂಕ್ಷ್ಮವಿರಬಹುದು; ಕೆಲವರ ಕರ್ಮ ಸ್ಥೂಲವಿರಬಹುದು. ಉದಾಹರಣೆಗಾಗಿ, ಧ್ಯಾನ ಮಾಡುವುದು ಸೂಕ್ಷ್ಮ ಕರ್ಮ. ವ್ಯವಸಾಯ ಮಾಡುವುದು ಸ್ಥೂಲ ಕರ್ಮ. ಏನೇ ಆದರೂ ಕರ್ಮ ಮಾತ್ರ ಬೇಕು, ದೇಹ ಇರುವವರೆಗೆ. ದೇಹ ಅಳಿದು, ಮನಸ್ಸು ಬಯಲಾದ ಬಳಿಕ ನಾನು ನನ್ನಲ್ಲಿ ಅಂದರೆ ಆ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಆತ್ಮನಲ್ಲಿ ನೆಲೆಸುತ್ತೇನೆ. ಅದು ಕೈವಲ್ಯ. ಆಗ ಮಾತ್ರ ಕರ್ಮವಿಲ್ಲ. ಕೇವಲ ಚೇತನಾಸ್ತಿತ್ವ.

ಅಂಥ ಕೈವಲ್ಯ ಸಮನಿಸುವವರೆಗೆ ಕರ್ಮ ಅತ್ಯಾಜ್ಯ. ಅ–ತ್ಯಜನೀಯ! ಇನ್ನು ಎಲ್ಲ ಕರ್ಮಗಳೂ ಒಂದೇ ಅಲ್ಲ. ಅವುಗಳಲ್ಲಿ ಎರಡು ವಿಧ; ಕೆಟ್ಟ ಕರ್ಮಗಳು(ಅಕರ್ಮ), ಒಳ್ಳೆಯ ಕರ್ಮಗಳು(ಕರ್ಮ) ಎಂದು. 'ಕಿಂ ಕರ್ಮ ಕಿಮಕರ್ಮೇತಿ ಕವಯೋऽಪ್ಯತ್ರ ಮೋಹಿತಾಃ ಯಾವುದು ಕರ್ಮ? ಯಾವುದು ಅಕರ್ಮ? ಎಂಬುದನ್ನು ನಿರ್ಧರಿಸುವುದು ಬಲ್ಲವರಿಗೂ ಕಷ್ಟ! ಆದರೂ ಒಂದು ಸಾಮಾನ್ಯ ಲಕ್ಷಣ ಹೇಳಬಹುದು. ಪರಿಣಾಮದಲ್ಲಿ ಸಮಾಧಾನ ನೀಡುವುದು ಕರ್ಮ; ಅಸಮಾಧಾನ ನೀಡುವುದು ಅಕರ್ಮ, ಸತ್ಯಶುದ್ಧವಾದುದು ಕರ್ಮ, ಹಾಗಿಲ್ಲದುದು ಅಕರ್ಮ. ಸ್ವ ಪರಹಿತ ಮಾಡುವುದು ಕರ್ಮ; ಮಾಡದಿರುವುದು ಅಕರ್ಮ.

ಕರ್ಮದ ಪರಿಣಾಮ ಎಷ್ಟು ಮಹತ್ವದ್ದೋ ಉದ್ದೇಶವೂ ಅಷ್ಟೇ ಮಹತ್ವದ್ದು. ಉದ್ದೇಶ ಒಳ್ಳೆಯದಿದ್ದು ಪರಿಣಾಮ ಕೆಟ್ಟದಾಗಿರುವ ಸಾಧ್ಯತೆಯಿದೆ; ಉದ್ದೇಶ ಕೆಟ್ಟದಾಗಿದ್ದು ಪರಿಣಾಮ ಒಳ್ಳೆಯದಾಗಿರುವ ಸಾಧ್ಯತೆಯೂ ಇದೆ. ಉದಾ: ಸಂಪಾದನೆ. ಧನ ಸಂಪಾದನೆಗಾಗಿ ದುಡಿಯುತ್ತೇವೆ ಪ್ರಾಮಾಣಿಕವಾಗಿ. ಆದರೆ ಆ ಸಂಪಾದನೆಯೇ ಪರಮಾರ್ಥವಾಗಿಬಿಟ್ಟರೆ ನಮ್ಮ ಸಂಪೂರ್ಣ ಬದುಕೇ ಹಾಳಾಗುತ್ತದೆ.

ಇನ್ನು ಭಿಕ್ಷುಕನ ತಲೆಗೆ ಗುರಿಯಿಟ್ಟು ಬೀಸಿದ ರೂಪಾಯಿ ನಾಣ್ಯವನ್ನು ಭಿಕ್ಷುಕ ಜಾಣ್ಮೆಯಿಂದ ಹಿಡಿದುಕೊಳ್ಳುತ್ತಾನೆ. ಒಂದು ರೂಪಾಯಿ ಇತ್ತುದಕ್ಕೆ ಧನ್ಯವಾದ ಹೇಳಿ, ಸಂತೋಷದಿಂದ ಹೊರಟುಹೋಗುತ್ತಾನೆ. ಮೊದಲನೆಯ ದೃಷ್ಟಾಂತದಲ್ಲಿ ಉದ್ದೇಶ ಒಳ್ಳೆಯದು, ಪರಿಣಾಮ ಕೆಟ್ಟ, ಎರಡನೆಯ ದೃಷ್ಟಾಂತದಲ್ಲಿ ಉದ್ದೇಶ ಕೆಟ್ಟ, ಪರಿಣಾಮ ಒಳ್ಳೆಯದು!

ಕರ್ಮದ ಉದ್ದೇಶವೂ ಒಳ್ಳೆಯದಿರಬೇಕು; ಅಷ್ಟೇ ಅಲ್ಲ ಕರ್ಮ ಕೂಡ ಸತ್ಯವೂ ಶುದ್ಧವೂ ಆಗಿರಬೇಕು. ಹಾಗಿಲ್ಲದುದು 'ಅಕರ್ಮ' ಹಾಗಿದ್ದುದು 'ಕರ್ಮ'. ಅಕರ್ಮ ವರ್ಜ್ಯ; ಕರ್ಮ ಕರಣೀಯ. 'ಅಕರ್ಮ'ವನ್ನು ಜೀವನಾದ್ಯಂತ ಮಾಡಿದರೂ ಅದು ಕರ್ಮಯೋಗವೆನಿಸದು.

*ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ,*
*ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ!*
*ಮಾಡುವ ನೀಡುವ ನಿಜಗುಣವುಳ್ಳರೆ*
*ಕೂಡಿಕೊಂಬ ನಮ್ಮ ಕೂಡಲಸಂಗಮದೇವಾ.*

ನಾವು ಹಗಲು ರಾತ್ರಿ ಜೀವನಾದ್ಯಂತ ದುಡಿಯುತ್ತೇವೆ. ಆದರೂ ಬಾಳ ಬಂಧನ ತಪ್ಪಿಲ್ಲ. ನೀಡುತ್ತೇವೆ, ಆದರೆ ನೀಡಿದ ಧರ್ಮ ನಮ್ಮನ್ನು ಪ್ರಾಪಂಚಿಕ ಮೋಹಬಂಧನದಿಂದ ಮೇಲೆತ್ತಿಲ್ಲ. ಏಕೆ? ನಮ್ಮದು ಕರ್ಮ ಜೀವನ; ಕರ್ಮಯೋಗ ಜೀವನವಲ್ಲ. 'ಮಾಡುವ ನೀಡುವ ನಿಜಗುಣ' ನಮ್ಮಲ್ಲಿಲ್ಲ. ಬಸವಣ್ಣನವರು, ಸಿದ್ಧರಾಮಣ್ಣನವರು ಸತ್ಯ–ಶುದ್ಧ ಕಾಯಕ ನಿಷ್ಠರು. ಲೋಕದ ಹಿತಕ್ಕಾಗಿ, ಧರ್ಮ ಸಾಧನೆಗಾಗಿ ಸಾವಿರಾರು ಕರ್ಮಗಳನ್ನಾಚರಿಸಿದರು; ಎಲ್ಲ ರೀತಿಯಿಂದ. ಬಾವಿ ಕೆರೆ ಕಟ್ಟಿಸಿದರು; ಮಹಾದಾಸೋಹ ನಡೆಸಿದರು; ಧಾರ್ಮಿಕ ಸಾಮಾಜಿಕ ಪ್ರಜ್ಞೆಯನ್ನು ಜಾಗ್ರತಗೊಳಿಸಿದರು; ತಾತ್ವಿಕ ದೃಷ್ಟಿಯನ್ನಿತ್ತರು. ಅನುಭಾವ ಗೋಷ್ಠಿಗಳ ನಡೆಸಿದರು; ನಾಡಿನಲ್ಲಿ ಆತ್ಮಜ್ಞಾನದ ದೀವಟಿಗೆ ಉರಿಸಿದರು ಸತತವಾಗಿ. ಆದರೆ ಒಂದು ಅಚ್ಚರಿಯೆಂದರೆ ಆ ಕರ್ಮಗಳಲ್ಲಿ ಅವರು ಕ್ಷಣಮಾತ್ರವೂ ಬಂಧಿತರಾಗಲಿಲ್ಲ. ನಿರ್ಲಿಪ್ತ ಮನೋಭಾವ ಫಲಾಕಾಂಕ್ಷಾರಾಹಿತ್ಯ; ದೇವನಲ್ಲಿ ಸಮರ್ಪಿತ ಮನೋಭಾವ; ಇವೆಲ್ಲ ಅವರಲ್ಲಿ ವಿಕಸಿತ.

ಶಂಕರರು ನಾಡಿನ ನಾಲ್ಕೂ ನಿಟ್ಟಿನಲ್ಲಿ ಚರಿಸಿದರು; ಕಷ್ಟಗಳ ಸಹಿಸಿದರು; ಅದ್ವೈತ ಜ್ಞಾನವನ್ನು ಹರಡಿದರು. ಜ್ಞಾನೇಶ್ವರರು ಬಾಲವಯಸ್ಸಿನಲ್ಲಿಯೇ 'ಜ್ಞಾನೇಶ್ವರಿ' ಎಂಬ ಅಮರ ಕಾವ್ಯ ರಚಿಸಿದರು. ಸಾವಿರಾರು ಜನರ ಬದುಕಿನಲ್ಲಿ ಆಧ್ಯಾತ್ಮದ ರಸವ ಸುರಿಸಿದರು. ಅವರ ಕರ್ಮಗಳು ಅಬಾಧಕ ವಿಮೋಚಕ; ತಾರಕ. ಅವರದು ಕರ್ಮಯೋಗ ಜೀವನ!

ನಾವೂ ದುಡಿಯುತ್ತೇವೆ ಸಾಕಷ್ಟು. ಆದರೆ ಅದೆಲ್ಲಾ ಸಾಂಸಾರಿಕ ವಿಷಯಗಳಿಗಾಗಿ, ಧನ ಕನಕಗಳಿಗಾಗಿ. ಆದ್ದರಿಂದ ಆ ದುಡಿಮೆಯೇ ನಮಗೆ ಬಂಧನಗೊಳಿಸುತ್ತಲಿದೆ. ದುಡಿಯಬೇಕು; ದುಡಿಮೆಯ ತ್ಯಜಿಸಲಾಗದು. ಆದರೆ ಆ ದುಡಿಮೆಯೆಲ್ಲ ದೇವನಿಗಾಗಿ ಜ್ಞಾನಕ್ಕಾಗಿ ಹಾಗೂ ಜಗತ್ತಿನಲ್ಲಿ, ಜೀವನದಲ್ಲಿ 'ಸತ್ಯಂ ಶಿವಂ ಸುಂದರಂ' ಅಭಿವ್ಯಕ್ತಿಗಾಗಿ. ಮಾಡುವ ನೀಡುವ ನಿಜಗುಣವುಳ್ಳರೆ ಪರಮಾತ್ಮನ ಅನುಗ್ರಹ ಸಮನಿಸುತ್ತದೆ.

ದುಡಿಮೆಯಿಂದ ಪ್ರಸನ್ನತಾ–ಪ್ರಸಾದ ಉಂಟಾದರೆ ಅದೇ ಕರ್ಮಯೋಗ. ದುಃಖ–ಬಂಧನ ಉಂಟಾದರೆ





ದುಡಿಮೆಯೇ 'ಅಕರ್ಮ', ಸಲ್ಲದ ಕರ್ಮ; ಬಾಧಕ ಕರ್ಮ. ಮನುಷ್ಯ ಪ್ರಾಮಾಣಿಕವಾಗಿ, ಸದ್ಭಾವದಿಂದ ದುಡಿಯಬೇಕು; ಅದು ಕಾಯಕ. ಕಾಯಕದ ಪ್ರತಿಫಲವನ್ನು ದೇವನಿಗೆ, ದೇವನಂತ ವ್ಯಕ್ತಿಗಳಿಗೆ ಹಾಗೂ ಜೀವಜಂತುಗಳಿಗೆ ಅರ್ಪಿಸಬೇಕು. ಅದು ಅರ್ಪಣ. ಬಳಿಕ ಹಾಗೆ ದೇವಾರ್ಪಿತವಾದುದನ್ನು ತಾನು ಸ್ವೀಕರಿಸಬೇಕು; ಅದು ಪ್ರಸಾದ. ನಮ್ಮ ಕರ್ಮದ ಕೇಂದ್ರ ಬಿಂದು ದೇವನಾಗಬೇಕು. ಅವನ ನೆನಹಿನೊಂದಿಗೆ ದುಡಿಮೆ; ಅವನಿಗಾಗಿ ಅರ್ಪಣೆ; ಅವನದೆಂದೇ ಸ್ವೀಕಾರ! ಇಂಥ ಪ್ರಸಾದ ನಮ್ಮ ಬಾಹ್ಯಾಂತರಂಗವನ್ನೆಲ್ಲ ಹಸನಾಗಿಸುತ್ತದೆ! ಪ್ರಸನ್ನತೆಯದರಿಂದ ಅಳವಡುತ್ತದೆ! ಅದು ದೇವಕೃಪೆ. ಅದು ಭಗವತ್ಸಿದ್ಧಿ! ಸತ್ಯಾನುಭವದ ಬದುಕು.

ಈ ಪ್ರಸಾದೀಕರಣದ ಸಾಧನೆಯ ಕ್ರಮ ಹೀಗಿದೆ; ಇದೊಂದು ಹೂ. ಇದರಲ್ಲಿ ರೂಪಿದೆ; ಸೌಂದರ್ಯವಿದೆ. ನಮ್ಮ ಇಷ್ಟಲಿಂಗಕ್ಕೆ, ಇಷ್ಟದೇವತೆಗೆ ಈ ಹೂವನ್ನು ಅರ್ಪಿಸುತ್ತೇವೆ. ರೂಪವನ್ನು ನಿವೇದಿಸುತ್ತೇವೆ. ಈಗ ಈ ರೂಪು ದೇವನದು. ಹೂ ದೇವನದು. ನಮ್ಮದಲ್ಲ. ಈ ಭಾವದಿಂದಲೇ ಅದೇ ಹೂವಿನ ಸೌಂದರ್ಯವನ್ನು ನೋಡುತ್ತೇವೆ; ಕಣ್ಣ ತುಂಬಿಕೊಳ್ಳುತ್ತೇವೆ ಆ ಸೊಬಗಿನಿಂದ. ಅದನ್ನು ಅನುಭವಿಸುತ್ತೇವೆ. ಆನಂದಿಸುತ್ತೇವೆ. ಅದು ಪ್ರಸಾದ! ಅದು ಪ್ರಸನ್ನತೆ!

ವಿಷಯವು ರೂಪು. ಆ ರೂಪು ಲಿಂಗಾರ್ಪಿತವಾದ ಬಳಿಕ ನಾನು ಸ್ವೀಕರಿಸುತ್ತೇನೆ; ಆಸ್ವಾದಿಸುತ್ತೇನೆ. ಅದು ರುಚಿ. ನಂತರ ಪವಿತ್ರವಾದ ಆನಂದ ಉಂಟಾಗುತ್ತೆ. ಅದರ ಅನುಭವವದು 'ಅನುಭಾವ' ಪ್ರಸಾದ. ತೃಪ್ತಿ ಪ್ರಸಾದ! ಅರ್ಪಿತ ಹಾಲು ರೂಪ ಪ್ರಸಾದ. ಸ್ವೀಕೃತ ಹಾಲು ರುಚಿ ಪ್ರಸಾದ. ಉಂಟಾಗುವ ತುಷ್ಟಿ ತೃಪ್ತಿ ಪ್ರಸಾದ! ರೂಪ ಪ್ರಸಾದವು ಶುದ್ಧ ಪ್ರಸಾದ; ರುಚಿ ಪ್ರಸಾದವು ಸಿದ್ಧ ಪ್ರಸಾದ; ತೃಪ್ತಿ ಪ್ರಸಾದವೇ ಪ್ರಸಿದ್ಧ ಪ್ರಸಾದ. ಅದೇ ರೀತಿ, ನಾವು ಗೈದ ಎಲ್ಲ ಕರ್ಮ ಮತ್ತು ಕರ್ಮಫಲಗಳನ್ನು ದೇವನಿಗೆ ಅರ್ಪಿಸುವುದು ಶುದ್ಧ ಪ್ರಸಾದ; ಆ ಅರ್ಪಿತ ಫಲಗಳನ್ನು ದೇವನ ಕರುಣೆ ಎಂಬ ಭಾವದಿಂದ ಅನುಭವಿಸುವುದು ಸಿದ್ಧ ಪ್ರಸಾದ; ಅದರಿಂದ ಉಂಟಾದ ತೃಪ್ತಿಯನ್ನು ಭಗವತ್ಕೃಪೆ ಎಂದು ಅನುಭವಿಸುವುದು ಪ್ರಸಿದ್ಧ ಪ್ರಸಾದ! 'ರೂಪ' ಪ್ರಸಾದದಿಂದ ದೇಹೇಂದ್ರಿಯಗಳ ಶುದ್ಧಿ. ರುಚಿ ಪ್ರಸಾದದಿಂದ ಭಾವ ಸಿದ್ಧಿ. ತೃಪ್ತಿ ಪ್ರಸಾದದಿಂದ ಅನುಭಾವ!

ಶುದ್ಧ ಪ್ರಸಾದದಿಂದ ದೇಹೇಂದ್ರಿಯ ಪ್ರಸನ್ನತೆ. ಸಿದ್ಧ ಪ್ರಸಾದದಿಂದ ಮನಸ್ಸಿನ ಪ್ರಸನ್ನತೆ. ಪ್ರಸಿದ್ಧ ಪ್ರಸಾದದಿಂದ ಭಾವ ಪ್ರಸನ್ನತೆ. ದೇಹದ ದುಡಿಮೆಯಿಂದ ದೇಹಕ್ಕೆ ಪ್ರಸನ್ನತೆ. ಮನಸ್ಸಿನ ದುಡಿಮೆಯಿಂದ ಮನಸ್ಸಿಗೆ ಪ್ರಸನ್ನತೆ. ಬುದ್ಧಿಯ ದುಡಿಮೆಯಿಂದ ಮತಿಗೆ ಪ್ರಸನ್ನತೆ. ಇದು ಸರ್ವಾಂಗ ಪ್ರಸನ್ನತೆ. ಇನ್ನು ಈ ಸರ್ವಾಂಗಪ್ರಸನ್ನನಾದ ಜೀವ(ಅಂಗ)ನು ತನ್ನನ್ನೇ ದೇವನಲ್ಲಿ ಸಮರ್ಪಿಸಿಕೊಂಡು ಸಮಾಲೀನವಾದರೆ ಆತ ಸ್ವತಃ ಪ್ರಸಾದಗೊಳ್ಳುತ್ತಾನೆ. ದೇವಾಭಿನ್ನ ಅನುಭೂತಿಯದು! ಅದೇ ಅನುಭಾವ! ಅದು 'ಏಕಪ್ರಸಾದ'. ನಾನು ಪ್ರಸಾದ, ಸ್ವೀಕರಿಸುವವ ಎಂಬ ಭಾವ ಇಲ್ಲ. ಪ್ರಸಾದವೂ ಇಲ್ಲ. ಪ್ರಸಾದಕ್ಕೆ ಕಾರಣವಾದ ಅರ್ಪಣವೂ ಇಲ್ಲ. ಪ್ರಸಾದ ಸ್ವೀಕರಿಸುವ ಕ್ರಿಯೆಯು ಇಲ್ಲ. ಎಲ್ಲಾ ನಿಂತು ಹೋಗಿ ಬರಿ ಪ್ರಸಾದ ಸ್ವೀಕರಿಸುವ ಕ್ರಿಯೆಯು ಇಲ್ಲ. ಎಲ್ಲಾ ನಿಂತುಹೋಗಿ ಬರಿ ಪ್ರಸಾದ ಉಳಿದರದು ಏಕ ಪ್ರಸಾದ! ಈ ಸ್ಥಿತಿಗೆ ತಲುಪಿಸುವ ಕ್ರಿಯೆಗೆ ಕರ್ಮಯೋಗ, ಕಾಯಕಯೋಗ ಎಂಬ ನಾಮ!

ನಾವು ಯಾವುದಾದರೂ ಕ್ಷೇತ್ರದಲ್ಲಿ ಇರಲಿ, ಅಲ್ಲಿ ಮನಮುಟ್ಟಿ ದುಡಿಯುವುದು. ಕಳವು ಹಿಂಸೆ ಹುಸಿ ಆತ್ಮ ಬಣ್ಣನೆ ನಿಂದೆ ದ್ವೇಷ ಮೋಹಾದಿಗಳಿಲ್ಲದ ಬಾಹ್ಯಾಂತರ ಶುದ್ಧ ಭಾವದಿಂದ ಶ್ರಮಿಸುವುದು. ಬಂದ ಕರ್ಮಫಲವ ದೇವಭಾವದಿಂದ ಅರ್ಪಿಸಿ ಅನುಭವಿಸುವುದು. ಇದರಿಂದ ಬದುಕೆಲ್ಲ ಪ್ರಸಾದಮಯವಾಗುತ್ತದೆ. ಒಟ್ಟಿನಲ್ಲಿ, ದುಡಿಮೆ ಅತ್ಯಂತ ಮಹತ್ವದ್ದು. ಮನುಷ್ಯ ನೂರು ವರುಷ ಬದುಕಿದರೂ ಸರಿ, ದುಡಿಮೆ ನಿಲ್ಲಬಾರದು; ಒಂದಿಲ್ಲ ಒಂದು ಕಾಯಕ ಮಾಡಬೇಕು. ಅದೂ ಅತ್ಯಂತ ಪ್ರೇಮದಿಂದ; ದೇವ ಶ್ರದ್ಧೆಯಿಂದ.

ನಾವು ಬಯಸಿದರೂ ಸರಿ, ಬಯಸದಿದ್ದರೂ ಸರಿ, ದುಡಿಮೆಗೆ ಪ್ರತಿಫಲ ಬಂದೇ ಬರುತ್ತದೆ. ಅದನ್ನು ಭಗವದ್ವಸ್ತುವೆಂದು ಭಾವಿಸಬೇಕು. ಅದರ ಒಂದಂಶ ದೇವಾನುಗ್ರಹವೆಂದು ಸ್ವೀಕರಿಸಬೇಕು. ಅದು ಪ್ರಸಾದ, ಶಬ್ದ ಸ್ಪರ್ಶ ರೂಪ ರಸ ಗಂಧ ಸುಖ ದುಃಖ ಇವೆಲ್ಲವೂ ಅರ್ಪಿತ ಪ್ರಸಾದವಾಗಬೇಕು! ಅರ್ಪಣೆಗಾಗಿಯೇ ಕರ್ಮ ಮತ್ತು ಕರ್ಮಫಲ! ಪ್ರಸಾದಭಾವವೇ ಜೀವನ! ಹೀಗಾದರೆ ನಮ್ಮ ಬದುಕು ಸಾರ್ಥಕ, ದಿವ್ಯ, ಪವಿತ್ರ! ❖

## ೨೦೧೩ನೇ ವರ್ಷದ ಬಸವಾದಿ ಶರಣರ ಸ್ಮರಣೋತ್ಸವಗಳು

| | | | |
|---|---|---|---|
| 1. | ಜನವರಿ ೧೧– ಶುಕ್ರವಾರ | ಎಳ್ಳುಅಮಾವಾಸ್ಯೆ | ಒಕ್ಕಲಿಗ ಮುದ್ದಣ್ಣ |
| 2. | ಜನವರಿ ೧೪– ಸೋಮವಾರ | ಸಂಕ್ರಮಣ | ಸಿದ್ಧರಾಮೇಶ್ವರ |
| 3. | ಜನವರಿ ೨೭– ರವಿವಾರ | ಬನದ ಹುಣ್ಣಿಮೆ | ಮೇದಾರ ಕೇತಯ್ಯ |
| 4. | ಫೆಬ್ರವರಿ ೧೦– ರವಿವಾರ | ಅವರಾತ್ರಿ ಅಮಾವಾಸ್ಯೆ | ಜೇಡರ ದಾಸಿಮಯ್ಯ |
| 5. | ಫೆಬ್ರವರಿ ೨೫ –ಸೋಮವಾರ | ಭಾರತ ಹುಣ್ಣಿಮೆ | ಕಿನ್ನರಿ ಬೊಮ್ಮಯ್ಯ |
| 6. | ಮಾರ್ಚ್೧೦– ರವಿವಾರ | ಮಹಾಶಿವರಾತ್ರಿ | ಡೋಹರ ಕಕ್ಕಯ್ಯ |
| 7. | ಮಾರ್ಚ್೨೭– ಬುಧವಾರ | ಹೋಳಿ ಹುಣ್ಣಿಮೆ | ಬಿಬ್ಬಿ ಬಾಚಯ್ಯ |
| 8. | ಏಪ್ರಿಲ್ ೧೧ –ಗುರುವಾರ | ಯುಗಾದಿ ಪಾಡ್ಯ | ಅಲ್ಲಮಪ್ರಭುದೇವ |
| 9. | ಏಪ್ರಿಲ್ ೨೫ –ಗುರುವಾರ | ದವನದ ಹುಣ್ಣಿಮೆ | ಅಕ್ಕಮಹಾದೇವಿ |
| 10. | ಮೇ ೧೩– ಸೋಮವಾರ | ಅಕ್ಷಯ ತೃತೀಯ | ಬಸವಣ್ಣನವರು |
| 11. | ಜೂನ್ ೮ – ಶನಿವಾರ | ಬಾದಾಮಿ ಅಮಾವಾಸ್ಯೆ | ಕುರುಬ ಗೊಲ್ಲಾಳ |
| 12. | ಜೂನ್ ೨೩– ರವಿವಾರ | ಕಾರ ಹುಣ್ಣಿಮೆ | ಅಂಬಿಗರ ಚೌಡಯ್ಯ |
| 13. | ಜುಲೈ ೨೨ –ಸೋಮವಾರ | ಕಡ್ಲಿಗಡಬ ಹುಣ್ಣಿಮೆ | ಹಡಪದ ಅಪ್ಪಣ್ಣ |
| 14. | ಆಗಸ್ಟ್ ೧೧ –ರವಿವಾರ | ನಾಗಪಂಚಮಿ | ಅಕ್ಕನಾಗಮ್ಮ |
| 15. | ಆಗಸ್ಟ್ ೧೨– ಸೋಮವಾರ | ೧ನೇ ಶ್ರಾವಣ ಸೋಮವಾರ | ಶಂಕರ ದಾಸಿಮಯ್ಯ |
| 16. | ಆಗಸ್ಟ್ ೨೧– ಬುಧವಾರ | ನೂಲಹುಣ್ಣಿಮೆ | ನುಲಿಯ ಚಂದಯ್ಯ |
| 17. | ಸೆಪ್ಟೆಂಬರ್ ೯– ಸೋಮವಾರ | ಗಣೇಶ ಚೌತಿ | ಮಡಿವಾಳ ಮಾಚಿದೇವ |
| 17. | ಅಕ್ಟೋಬರ್ ೧೩– ರವಿವಾರ | ಮಹಾನವಮಿ | ಹರಳಯ್ಯ ಮಧುವಯ್ಯ |
| 18. | ಅಕ್ಟೋಬರ್ ೧೪ ಸೋಮವಾರ | ವಿಜಯದಶಮಿ | ಕಲ್ಯಾಣಕ್ರಾಂತಿ ವಿಜಯ |
| 19. | ಅಕ್ಟೋಬರ್ ೧೮ ಶುಕ್ರವಾರ | ಶೀಗೆ ಹುಣ್ಣಿಮೆ | ಗಂಗಾಂಬಿಕೆ |
| 20. | ನವೆಂಬರ್ ೪– ಸೋಮವಾರ | ದೀಪಾವಳಿ ಪಾಡ್ಯ | ಚೆನ್ನಬಸವಣ್ಣ |
| 21. | ನವೆಂಬರ್ ೧೭– ರವಿವಾರ | ಗೌರಿ ಹುಣ್ಣಿಮೆ | ನೀಲಾಂಬಿಕೆ |
| 22. | ಡಿಸೆಂಬರ್ ೨– ಸೋಮವಾರ | ಭಟ್ಟಿ ಅಮಾವಾಸ್ಯೆ | ದಾನಮ್ಮ ದೇವಿ |
| 23. | ಡಿಸೆಂಬರ್ ೧೭– ಮಂಗಳವಾರ | ಹೊಸ್ತಿಲ ಹುಣ್ಣಿಮೆ | ಮಾದಾರ ಚೆನ್ನಯ್ಯ |

### ವಿಶೇಷ ಸ್ಮರಣೋತ್ಸವಗಳು

| | | |
|---|---|---|
| 24. | ಫೆಬ್ರವರಿ ೧೮ – ಸೋಮವಾರ | ಶರಣ ಹರ್ಡೇಕರ ಮಂಜಪ್ಪನವರು |
| 25. | ಜುಲೈ ೨ – ಮಂಗಳವಾರ | ಶರಣ ಫ.ಗು. ಹಳಕಟ್ಟಿಯವರು |
| 25. | ಅಕ್ಟೋಬರ್ ೨೮ – ಸೋಮವಾರ | ಶರಣ ಉತ್ತಂಗಿ ಚೆನ್ನಪ್ಪನವರು |

ಸಂಗ್ರಹ :
ಪ್ರೊ. ಸಿದ್ಧಣ್ಣ ಲಂಗೋಟಿ(ಚಾಂದಕವಠೆ)
ಗೌರವ ಸಂಪಾದಕರು, ಬಸವ ಬೆಳಗು ಪತ್ರಿಕೆ, ರಾಮದುರ್ಗ-೫೯೧ ೧೨೩. ಬೆಳಗಾವಿ ಜಿಲ್ಲೆ.







## ಸಿದ್ಧಗಂಗೆಯಲ್ಲಿ ಶ್ರೀ ಅಟವೀಶ್ವರರು

–ಕೋ.ರಂ. ಬಸವರಾಜು *



*ನಿನ್ನ ನೆನೆವುದೆ ಮೌನಜಪತಪ*
*ನಿನ್ನ ನೆನೆವುದೆ ಯೋಗಭೋಗವು*
*ನಿನ್ನ ನೆನೆವುದೆ ಶಾಂತಿದಾಂತಿಯು ಸರ್ವಸಾಧನವೂ*
*ನಿನ್ನ ನೆನೆವುದೆ ಶಕ್ತಿಯುಕ್ತಿಯು*
*ನಿನ್ನ ನೆನೆವುದೆ ಭಕ್ತಿಮುಕ್ತಿಯು*
*ಸನ್ನುತನೆ ಕೃಪೆಮಾಡಿ ಪಾಲಿಪುದೆಮ್ಮನಟವೀಶಾ*
(ಅ. ಗುರುಭಕ್ತಿಸಾರ)

ಶ್ರೀ ಗೋಸಲ ಸಿದ್ಧೇಶ್ವರರಿಂದ ಸ್ಥಾಪಿತವಾದ ಶ್ರೀ ಸಿದ್ಧಗಂಗೆಯ ನಿಸರ್ಗ ಸೊಬಗಿನ ಶಿವಯೋಗ ಭೂಮಿಯಿಂದ ಆಕರ್ಷಿತರಾಗಿ ಅನೇಕ ಶಿವಯೋಗಿಗಳು ಇಲ್ಲಿ ನೆಲೆನಿಂತು ಅನುಷ್ಠಾನ ಅನುಸಂಧಾನಾದಿಗಳನ್ನು ಮಾಡಿದ್ದಾರೆ. ತನ್ಮೂಲಕ ಸಿದ್ಧಗಂಗೆಯ ಮಹಿಮೆಗೆ ಕಾರಣೀಭೂತರಾಗಿದ್ದಾರೆ. ಅಂಥ ಶಿವಯೋಗಿಗಳಲ್ಲಿ ಶ್ರೀಮದಟವೀಶ್ವರರು ವಿಶೇಷ ಗಣ್ಯರಾಗಿದ್ದಾರೆ.

ಶ್ರೀ ಮದಟವೀಶ್ವರರು ಸಿದ್ಧಗಂಗೆಗೆ ಬರುವ ಪೂರ್ವದಲ್ಲಿ ಅಮರಗೊಂಡದಲ್ಲಿ (ಗುಬ್ಬಿ) ಗೋಸಲಚನ್ನಬಸವೇಶ್ವರರ ಗದ್ದುಗೆಯ ಪಕ್ಕದಲ್ಲಿರುವ ತೊರೆಯ ದಡದಲ್ಲಿ ಮಠವೊಂದನ್ನು ಸ್ಥಾಪಿಸಿಕೊಂಡು ಅನುಷ್ಠಾನ ಮಾಡುತ್ತಾ ಆ ಗೋಸಲ ಚನ್ನಬಸವೇಶ್ವರ ಸ್ವಾಮಿಯ ಬೆಳ್ಳಿ ಪಾಲಕಿ ಉತ್ಸವಾದಿ ಕೈಂಕರ್ಯಗಳಿಂದ ಭಕ್ತಪ್ರಿಯರಾಗಿರುತ್ತಾರೆ. ನಂತರ ತೊಟ್ಟಲಕೆರೆಯಲ್ಲಿ ವಿರಕ್ತ ಮಠವನ್ನು ಕಟ್ಟಿ ಅನೇಕಾನೇಕ ಲೋಕೋಪಕಾರಕ ಸೇವೆಯಲ್ಲಿ ತೊಡಗಿರುತ್ತಾರೆ. ಆನಂತರದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ದಯಮಾಡಿಸುವರು. ಅವರ ಆಗಮನದಿಂದ ಸಿದ್ಧಗಂಗೆಯ ಕಾರ್ಯ ಕ್ಷೇತ್ರಕ್ಕೊಂದು ಹೊಸ ಚೈತನ್ಯ ಬಂದಂತಾಗುತ್ತದೆ. ಅಟವೀಶ್ವರರ ಆಗಮನದ ಮೊದಲೇ ಶ್ರೀ ಸಿದ್ಧಗಂಗೆಯಲ್ಲಿ ಗುರುಪರಂಪರೆಯ ಬಳಿವಿಡಿದು ಬಂದ ಶ್ರೀ ಸಿದ್ಧಲಿಂಗ ಸ್ವಾಮಿಗಳೆಂಬುವರು ಮಠಾಧಿಪತಿಗಳಾಗಿದ್ದರು. ಅವರು ಕ್ಷೇತ್ರಾಭಿವೃದ್ಧಿ ಕಾರ್ಯಗಳಲ್ಲಿ ಅಷ್ಟಾಗಿ ತೊಡಗಿಸಿಕೊಂಡಿರಲಿಲ್ಲ. ತಾವಾಯಿತು ತಮ್ಮ ಲಿಂಗತಪೋನುಷ್ಠಾನವಾಯಿತು ಎಂಬಂತಿದ್ದರು.

ಆದರೆ ಶ್ರೀ ಅಟವೀಶ್ವರರು ಸಿದ್ಧಗಂಗೆಗೆ ಬರುವ ಹೊತ್ತಿಗೆ 'ಸಿದ್ಧಗಂಗೆಗೆ ಹೋಗಿ ಗಂಗಾಪೂಜೆ ಮಾಡಿದರೆ ಸಂತಾನ ಭಾಗ್ಯ ಪ್ರಾಪ್ತವಾಗುತ್ತದೆ. ಗಂಗಾಸ್ನಾನ ಮಾಡಿದರೆ ಕುಷ್ಠರೋಗದಂಥ ರೋಗಗಳು ಪರಿಹಾರವಾಗುತ್ತವೆ. ಗಂಗಾಪಾನ ಮಾಡಿದರೆ ಭವರೋಗ ಕಳೆಯುತ್ತದೆ' ಇತ್ಯಾದಿಯಾಗಿ ಸಿದ್ಧಗಂಗಾ ಕ್ಷೇತ್ರದ ಮಹಿಮೆಯ ವಾರ್ತೆ ನಾಡಿನಾದ್ಯಂತ ಪಸರಿಸಿತ್ತು. ಭಕ್ತಜನ ವಿಶೇಷವಾಗಿ ಸೋಮ, ಮಂಗಳ, ಶುಕ್ರವಾರದಂತಹ ವಾರದ ದಿನಗಳಲ್ಲಿ ಎತ್ತಿನ ಬಂಡಿ ಹೂಡಿಕೊಂಡು ಸಿದ್ಧಗಂಗೆಗೆ ಬಂದು ಶ್ರೀ ಗೋಸಲ ಸಿದ್ಧೇಶ್ವರರಿಂದ ಉದ್ಭವವಾದ ಅಥವಾ ಸಿದ್ಧಿಸಿದ ಗಂಗೆಗೆ ಗಂಗಾಪೂಜೆ ಸಲ್ಲಿಸಿ, ಸಿದ್ಧಲಿಂಗೇಶ್ವರರನ್ನು ಅರ್ಚಿಸಿ, ತಾವೇ ತಂದ ಪಡಿ ಪದಾರ್ಥಗಳಿಂದ ಪಾಕಮಾಡಿ ಎಡೆ ದಾಸೋಹಗಳನ್ನು ಮಾಡಿ ಪ್ರಸನ್ನಾತ್ಮರುಗಳಾಗಿ ಹೋಗುತ್ತಿದ್ದರು.

ಇತ್ತ ಶ್ರೀ ಮದಟವೀಶ್ವರರು ಸಿದ್ಧಗಂಗೆಯ ಬೆಟ್ಟದ ಮೇಲಿನ ಗವಿಯಲ್ಲಿಯೇ ತೋಂಟದಾರ್ಯನ ಪದ ಸಾನ್ನಿಧ್ಯ

* ನಿವೃತ್ತ ಪ್ರಾಧ್ಯಾಪಕರು, ಮಧುಕೇಶ್ವರ ನಿಲಯ , ಎಸ್.ಐ.ಟಿ. ೫ನೇ ಅಡ್ಡರಸ್ತೆ, ಎಸ್.ಐ.ಟಿ. ಬಡಾವಣೆ, ತುಮಕೂರು.

ದಲ್ಲಿ ಲಿಂಗತಪೋಸಾಮ್ರಾಜ್ಯದಲ್ಲಿ ಕಾಲ ಕಳೆಯುತ್ತಿರುವಾಗ ಯೋಗಾಯೋಗವೆಂಬಂತೆ ಆ ಗುರುವಿನ ಗುರುತ್ವಾಕರ್ಷಣೆಗೊಳಗಾಗಿ ಮತಕೂರು ನಂಜುಂಡಶಿವಯೋಗಿಗಳ ಆಗಮನವಾಗುತ್ತದೆ. ಒಬ್ಬರು ಮಹಾಶಿವಯೋಗಿಗಳು, ಇನ್ನೊಬ್ಬರು ಮಹಾಪಂಡಿತರು, ಮಹಾದಾರ್ಶನಿಕರು, ಇವರಿಬ್ಬರ ಸಂಮ್ಮಿಲನದಿಂದ ಸಿದ್ಧಗಂಗೆಯ ಕಾರ್ಯ ಚಟುವಟಿಕೆಗಳು ಗರಿಗೆದರುತ್ತವೆ.

"ಇಂತೈತರ್ಪ ಭಕ್ತರ ಸಂದಣಿಯಂ ಕಂಡೊಂದು ದಿನಂ ಅಡವಿಸ್ವಾಮಿಯ ಚಿತ್ತದೋಳ್ ದರ್ಶನಾಶೀರ್ವಾದ ಮುಂತಾದ ಬಯಕೆಯಿಂದೈತರ್ಪ ಭಕ್ತರ ಸಮೂಹಕ್ಕೆ ಕ್ಷೇತ್ರದಲ್ಲಿ ಸದಾ ದಾಸೋಹ ನಡೆಯುವುದಾದರೆ ಬಹು ಪರಿಣಾಮವಾಗುವುದಲ್ಲವೆ?" "ಸರ್ವಸಮ್ಮತವಾದುದು ತಮ್ಮೊಂದೂಡೆ" ಎಂಬ ಇಬ್ಬರ ಸಮಾಲೋಚನೆಯಿಂದ ಹಿಂದೆ ಇದ್ದ ದಾಸೋಹ ನಿತ್ಯದಾಸೋಹವಾಗಿ ಹೊತ್ತಿಸಿದ ಬೆಂಕಿ ಆರದಂತಹ ಶ್ರೀಕ್ಷೇತ್ರದ ನಡವಳಿಕೆಯಾಗುತ್ತದೆ. ಆ ಇಬ್ಬರ ದೂರದೃಷ್ಟಿಯಿಂದ ಸಂಸ್ಕೃತ ವೇದಪಾಠಶಾಲೆ ತೆರೆಯಲ್ಪಡುತ್ತದೆ. ಹೀಗೆ ಈ ಅನ್ನದಾಸೋಹ-ಜ್ಞಾನ ದಾಸೋಹದ ವ್ಯವಸ್ಥೆ ಏಕಕಾಲಿಕವಾಗಿ ಬೆಟ್ಟದ ಮೇಲ್ಭಾಗದ ಗವಿಮಂಟಪದಲ್ಲಿಯೇ ಪ್ರಾರಂಭವಾಗುತ್ತವೆ. ಅಟವೀಶ್ವರರು ಮಠದ ಪಾಕಶಾಲೆಯ ಮೊದಲ ದಾಸೋಹಿಯಾದರೆ ನಂಜುಂಡಶಿವಯೋಗಿಗಳು ಪಾಠಶಾಲೆಯ ಮೊದಲ ಗುರುವೆನಿಸುತ್ತಾರೆ.

ಹೀಗೆ ಶ್ರೀ ಮದಟವೀಶ್ವರರು ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಅನ್ನದಾಸೋಹ ವಿದ್ಯಾದಾಸೋಹಗಳ ನಡವಳಿಕೆಗಳಿಗೆ ನಾಂದಿ ಹಾಡಿದುದಲ್ಲದೆ ಅಭಯ ದಾಸೋಹಕ್ಕೂ ಆರಂಭಿಕರಾದರು. ಇವರ ಕಾಲದಲ್ಲಿ ಸಿದ್ಧಗಂಗೆಯ ಕೀರ್ತಿ ಮನೆ ಮಾತಾಯಿತು. ನಾಡಿನ ನಾನಾಮೂಲೆಗಳಿಂದ ನಾನಾ ಆಧಿವ್ಯಾಧಿಗಳಿಗೊಳಗಾದ, ನಾನಾ ಗ್ರಹಭೀತಿಗಳಿಂದ ನರಳುವ, ನಾನಾ ಚಿಂತೆಯಲ್ಲಿ ಮುಳುಗಿರುವ ಜನರು ಬಂದು ಅಟವೀಂದ್ರರ ಗುರುಚರಣಕ್ಕೆ ಹಣೆ ಮಣಿದು, ಅವರು ತಮ್ಮ ಶಿವಹಸ್ತದಿಂದ ಮಂತ್ರಿಸಿಕೊಟ್ಟ ವಿಭೂತಿ ಧೂಳಿತವನ್ನು ಹಣೆಯಲ್ಲಿ ಧರಿಸಿ 'ಒಳ್ಳೆಯದಾಗಲಿ' ಎಂಬ ಅಭಯವಾಣಿಯನ್ನು ಆಶೀರ್ವಾದವನ್ನು ಪಡೆದು ಸರ್ವಭವ ರೋಗ ಮುಕ್ತರಾಗಿ ದರ್ಶನ ಭಾಗ್ಯವನ್ನು ಹೊತ್ತು ಸಂಭ್ರಮಿಸಿ ಹೋಗುತ್ತಿದ್ದರು. ಇದರ ಜೊತೆಗೆ ಕ್ಷೇತ್ರಾಧಿಪತಿ ತೋಂಟದಾರ್ಯನ ಉತ್ಸವವನ್ನು ಶರನ್ನವರಾತ್ರಿಯಲ್ಲಿ ಜಾತ್ರೋತ್ಸವದ ರೀತಿಯಲ್ಲಿ ಪ್ರಾರಂಭಿಸಿದರು. ಜಾತ್ರೆಯ ವೈಭವವನ್ನು ಮತಕೂರು ನಂಜುಂಡಶಿವಯೋಗಿಗಳವರು ತಮ್ಮ ಅಟವೀಶ ಚರಿತ್ರೆಯಲ್ಲಿ ವರ್ಣಿಸಿದ್ದಾರೆ.

*'ಭಲಾರೆ ಜಾತ್ರೆಯಿದು ಭಲಾರೆ ಜಾತ್ರೆಯಿದು*
*ಅಪಾರ ವಾದ್ಯಗಳಪಾರಜ್ಯೋತಿಗ*
*ಳಪಾರ ಸಂಭ್ರಮಮುಪಮಿಸಲಸದಳ ॥ ಭಲಾರೆ*
*ಚಡಾಳಕಾಂತಿಯ ಕಿಡೀ ಸೂಸುತಿಹ*
*ಗಡಾಬಾಜುಗಳ ಬೆಡಂಗ ನಿಟ್ಟಿಸು ॥ ಭಲಾರೆ*
*ಬಗೆಬಗೆ ಬಾಣಗಳಗೋ ಹಾರುತಿವೆ*
*ಪಗಲ್ ಬತ್ತಿಗಳ್ ಝಗಾಯಿಸುತಿವೆ ॥ ಭಲಾರೆ ...*

ಇದೆಲ್ಲದುದಕ್ಕಿಂತಲೂ ಶ್ರೀ ಅಟವೀಶ್ವರರು ಸಿದ್ಧಗಂಗೆಗೆ ಕೊಟ್ಟ ಮಹತ್ತರ ಕೊಡುಗೆಯೆಂದರೆ ಶ್ರೀಮದುದ್ದಾನ ಶಿವಯೋಗಿಗಳವರನ್ನು ಪೀಠಾಧಿಪತಿಗಳನ್ನಾಗಿ ನಿಯೋಜನೆ ಮಾಡಿದ್ದು. ಲಕ್ಕೂರು ರುದ್ರಪ್ಪನವರು (ಉದ್ದಾನಶ್ರೀಗಳವರ ಪೂರ್ವಾಶ್ರಮದ ಹೆಸರು) ತೋರಿದ ಲೋಕೋತ್ತರ ಲಿಂಗ ಕ್ರಿಯೆಗಳನ್ನು ಕಂಡು ಶ್ರೀ ಅಟವೀಶರು ಬೆರಗಾದರು. ರುದ್ರಪ್ಪನು ತನ್ನ ಶಿವಹಸ್ತದಿಂದ ಪಾಕಗೈದು ಪ್ರಸಾದವನ್ನು ನೀಡಿದುದರ ಫಲವಾಗಿ ಬಹಳ ಕಾಲದಿಂದಿದ್ದ ಅವರ (ಅಟವೀಶರ) ಅಸ್ತಮಾವ್ಯಾಧಿ ನಿವಾರಣೆಯಾದುದು; ಕಾರಗಾಲದ ನಟ್ಟಿರುಳು ಪಂಜಿನ ಬೆಳಕಿನಲ್ಲಿ ಸೌದೆ ಗಾಡಿಗಳನ್ನು ಹೊಡೆತಂದುದು; ಮಲೆನಾಡ ಮನ್ನೆಯರಾದ ದೇವಪ್ಪಗೌಡರಿಗೆ ಹಿಡಿದಿದ್ದ ಭೂತಚೇಷ್ಟೆಯನ್ನು ಬಿಡಿಸಿದುದು, ಮುಂತಾದ ಅತಿಮಾನುಷ ಹಾಗೂ ಅಸಾಮಾನ್ಯ ಕ್ರಿಯೆಗಳನ್ನು ಪರಿಭಾವಿಸಿ 'ಈತನೀತನೇ ಈ ಪೀಠಕ್ಕಧಿಪತಿ, ನಾನೇನಿದ್ದರೂ ಮಾರ್ಗದರ್ಶನ ಮಾಡುವವನಷ್ಟೆ' ಎಂಬುದಾಗಿ ಮನೋನಿಶ್ಚಯ ಮಾಡಿದರು. ಅದರಂತೆ ಅನತಿಕಾಲದಲ್ಲಿಯೇ ಲಕ್ಕೂರ ರುದ್ರಪ್ಪನನ್ನು ಸಿದ್ಧಗಂಗೆಯ ಮಠಾಧಿಪತಿಯನ್ನಾಗಿ ಮಾಡಿದರು.

ಶ್ರೀಮದ್ ಅಟವೀಶ್ವರರು ೧೯೧೧ರಲ್ಲಿ ಲಿಂಗೈಕ್ಯರಾದ ನಂತರವೂ ತಮ್ಮ ದಿವ್ಯವಾದ ಅದೃಶ್ಯವಾದ ಅಭಯ ಹಸ್ತವನ್ನು ಚಾಚುತ್ತಾ, ಉದ್ದಾನಶಿವಯೋಗಿಗಳನ್ನು ಆಶೀರ್ವದಿಸುತ್ತಾ ಬಂದರು. ಕ್ಷೇತ್ರದ ಅಭಿವೃದ್ಧಿಯಲ್ಲಿ ಕೈ ಹಿಡಿದು ಮುನ್ನಡೆಸಿದರು. ಅಡವೀಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಅವರ ತೋರುಗದ್ದುಗೆಯನ್ನು ಕಟ್ಟಿಸಲು ಉದ್ದಾನಶ್ರೀಗಳವರ ಕೈಲಿ ಯತ್ಕಿಂಚಿತ್ ಧನದ್ರವ್ಯವೂ ಇರಲಿಲ್ಲ. ಗದ್ದುಗೆಗಾಗಿ ಭೂಶುದ್ಧಿ ಮಾಡಿ ವಾಸ್ತು ನಿರ್ಣಯಿಸಿ 'ಏನು ಮಾಡುವುದು' ಎಂದು ಚಿಂತಾಮಗ್ನರಾದರು. ಆಗ ಅಂದು ಉದ್ದಾನಶಿವಯೋಗಿಗಳವರ ಶಿವ ಸ್ವಪ್ನದಲ್ಲಿ 'ನಾನಿದ್ದೇನೆ ಆರಂಭಿಸು' ಎಂಬ ಧ್ವನಿ ಕೇಳಿತು. ಮರುಹೊತ್ತಾರೆ ಶಿವಯೋಗಿಗಳು ಲಿಂಗಾರ್ಚನೆಗೈದು ಶಾಂತಧೀವದನರಾಗಿ ಮಠದ ಮುಂಭಾಗಕ್ಕೆ ದಯಮಾಡಿಸಿದ ಕ್ಷಣಹೊತ್ತಿನಲ್ಲಿಯೇ ಆಂಧ್ರದಿಂದ ಒಬ್ಬ ರೆಡ್ಡಿ ಭಕ್ತ ದಂಪತಿಗಳು ಬಂದು ನಮಸ್ಕಾರ ಹಾಕಿ ಸಾವಿರಾರು ರೂಪಾಯಿಗಳನ್ನು ದಾನರೂಪದಲ್ಲಿ ಅರ್ಪಿಸುತ್ತಾರೆ. ಅದರಿಂದ ಪೂಜ್ಯ ಉದ್ದಾನಶಿವಯೋಗಿಗಳು ಅಟವೀಶ್ವರರ ಗದ್ದುಗೆಯನ್ನು ಮಠದ ಪ್ರಾಂಗಣದಲ್ಲಿ ಕಟ್ಟಿಸಿದರು.

ಹೀಗೆ ಶ್ರೀಮದಟವೀಶ್ವರ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಕೆಲವು ಕಾಲ ನೆಲೆಯಾಗಿ ನಿಂತು ಅನ್ನದಾನ ವಿದ್ಯಾದಾನ ಅಭಯದಾನಗಳೆಂಬ ತ್ರಿವಿಧ ದಾಸೋಹ, ಜಾತ್ರೋತ್ಸವ, ಗುರುಪರಂಪರೆಯ ಬಳಿವಿಡಿದು ಬಂದವರಿಗೆ ಮಠಾಧೀಶತ್ವ ಮುಂತಾದ ಶ್ರೀಮಠದ ನಡವಳಿಕೆಗಳಿಗೆ ನಾಂದಿಹಾಡಿ ಯಾವತ್ತೂ ಸಿದ್ಧಗಂಗೆಯ ಕೀರ್ತಿಯು ಉತ್ತರೋತ್ತರ ಉತ್ತುಂಗವಾಗಿ ಬೆಳಗಲು ಕಾರಣಕರ್ತೃಗಳಾಗಿದ್ದಾರೆ.

*'ಅಡವೀಯೊಡೆಯನೆಂಬ ನಾಮ*
*ಒಡೆದು ಮೆರೆವ ದೇವ ನಿಮ್ಮ ।*
*ಬಿಡದೆ ನಂಬಿಕೊಂಬೆನೈ ಓ ಗುರುವರೇಣ್ಯ*
*ಬಡವನೆನ್ನಾ ಕರವ ಬಿಡದಿರೈ ॥* (-ಅ. ಚರಿತ್ರೆ)

❖

ಬಹಳ ಬೆಲೆಬಾಳುವಂತಹುದು ಕಾಲ. ವ್ಯಕ್ತಿಯಾಗಲಿ, ಸಮಾಜವಾಗಲಿ, ರಾಷ್ಟ್ರವಾಗಲಿ, ಕಾಲದ ಮಹತ್ವವನ್ನು ಅರಿತುಕೊಂಡು ಚೆನ್ನಾಗಿ ಬಳಕೆ ಮಾಡಿಕೊಳ್ಳುವ ತಿಳುವಳಿಕೆ ಬಂದರೆ ವ್ಯಕ್ತಿ ಉದ್ಧಾರವಾಗುತ್ತಾನೆ. ಸಮಾಜ ಉದ್ಧಾರವಾಗುತ್ತದೆ. ರಾಷ್ಟ್ರ ಉದ್ಧಾರವಾಗುತ್ತದೆ.

-ಶ್ರೀವಾಣಿ

## ಪ್ರಾತಃಸ್ಮರಾಮಿ....

೧

ಶ್ರೀಗಂಧಲೇಪಿತವಿಭೂತಿಧೃತಾಂಕಪಾದಂ
ಬಿಲ್ವಾರ್ಚಿತಾಕ್ಷತಸಮರ್ಪಿತದಿವ್ಯಪಾದಂ ।
ಹಾರೋಜ್ವಲಾರ್ಪಿತಮನೋಹರಭವ್ಯಪಾದಂ
ಪ್ರಾತಃಸ್ಮರಾಮಿ ಗುರು ತೇ ವರಪೂಜ್ಯಪಾದಂ ॥

೨

ಧರ್ಮಾರ್ಥಕಾಮಸುವಿಮುಕ್ತಿನಿದಾನಪಾದಂ
ದಾರಿದ್ರ್ಯದುಃಖಸುವಿನಾಶಕಪದ್ಮಪಾದಂ ।
ಬ್ರಹ್ಮಸ್ವರೂಪಸುಖದಾಯಕಪದ್ಮಪಾದಂ
ಪ್ರಾತಃಸ್ಮರಾಮಿ ಗುರು ತೇ ವರಪದ್ಮಪಾದಂ ॥

೩

ಲೋಕೇಸ್ತ್ರ ಭಕ್ತಜನವೃಂದಹೃದಂತಪದ್ಮಂ
ಚಿತ್ಸೂರ್ಯನಿಸೃತಕರೈಶ್ಚ ವಿಕೋಚಪದ್ಮಂ ।
ನಿರ್ದುಷ್ಟವೇದವರಸಾರಸುಬೋಧಪದ್ಮಂ
ಪ್ರಾತಃ ಸ್ಮರಾಮಿ ಗುರು ತೇ ವರಪೂಜ್ಯಪಾದಂ ॥

೪

ಭಕ್ತಾಗ್ರಗಣ್ಯವರಪೂಜಿತಪಾದಪದ್ಮಂ
ಭಕ್ತಾರ್ಚನೇಷ್ಟಫಲದಾಯಕಪಾದಪದ್ಮಂ ।
ರಾಜಾನುರಾಜವರವಂದಿತಪಾದಪದ್ಮಂ
ಪ್ರಾತಃ ಸ್ಮರಾಮಿ ಗುರು ತೇ ವರಪೂಜ್ಯಪಾದಂ ॥

೫

ಬಾಲಾರ್ಕಸನ್ನಿಭಮಯೂಖವಿಶಿಷ್ಟಯುಗ್ಮಂ
ಮಂಜುಕ್ವಣನ್ನಿನದಪಾದುಕಶೋಭಯುಗ್ಮಂ ।
ಸೌಂದರ್ಯಸೌರಭಸುಶೋಭಿತಪಾದಯುಗ್ಮಂ
ಪ್ರಾತಃ ಸ್ಮರಾಮಿ ಗುರು ತೇ ವರಪೂಜ್ಯಪಾದಂ ॥

'ಮಹಾಸನ್ನಿಧಿ'ಗೆ ಅರ್ಪಣೆ
ಪದ್ಯ ೨ರಲ್ಲಿ ನಿದಾನ=ಮೂಲಕಾರಣ ಎಂದರ್ಥ

ರಚನೆ: ಕೋ.ರಂ. ಬಸವರಾಜು

# ಶ್ರೀಮಠದ ಅಭಿವೃದ್ಧಿಗೆ ಮುನ್ನುಡಿ ಬರೆದ ಶ್ರೀ ಉದ್ದಾನಶಿವಯೋಗಿಗಳು

–ಎಚ್.ಎಸ್. ಸಿದ್ಧಗಂಗಪ್ಪ *



ಶ್ರೀ ಸಿದ್ಧಗಂಗಾ ಕ್ಷೇತ್ರದ ಅಭಿವೃದ್ಧಿಗೆ ಮುನ್ನುಡಿ ಬರೆದವರು ನಿಷ್ಕಾಮ ಕರ್ಮಯೋಗಿ ಶ್ರೀ ಉದ್ದಾನಶಿವಯೋಗಿಗಳು. ಅವರಿಟ್ಟ ಒಂದೊಂದು ಶಿವಪಾದವೂ ಶ್ರೀಮಠದ ಸಾಧನೆಯ ಹಾದಿಗೆ ಭದ್ರಬುನಾದಿ. ಜಾತಿಭೇದವಿಲ್ಲದೆ ಎಲ್ಲ ವರ್ಗದ ಗ್ರಾಮೀಣ ಬಡ ವಿದ್ಯಾರ್ಥಿಗಳ ಉಚಿತ ಶಿಕ್ಷಣ, ವಸತಿ, ಅನ್ನವನ್ನು ನೀಡಿ ಅವರ ಬದುಕಿಗೆ ಬೆಳಕಾದ ಪರಂಜ್ಯೋತಿ ಸ್ವರೂಪರು. ಕೇವಲ ಒಂದು ವರ್ಗಕ್ಕೆ ಸೀಮಿತವಾಗಿದ್ದ ಸಂಸ್ಕೃತವನ್ನು ಎಲ್ಲ ವರ್ಗದವರೂ ಕಲಿಯಲು ಅವಕಾಶ ಕಲ್ಪಿಸಿಕೊಟ್ಟು ಕ್ರಾಂತಿಕಾರಕ ಹೆಜ್ಜೆಯನ್ನಿಟ್ಟ ಮಹಾನುಭಾವರು ಬಹುಶಃ ಇದೇ ಭಾರತದಲ್ಲಿ ದಲಿತರಾದಿಯಾಗಿ ಎಲ್ಲ ವರ್ಗದವರಿಗೆ ಸಂಸ್ಕೃತ ಕಲಿಯಲು ಅವಕಾಶ ಕಲ್ಪಿಸಿಕೊಟ್ಟು ಮೊಟ್ಟ ಮೊದಲು ಮಠ ಎಂದರೆ ಶ್ರೀ ಸಿದ್ಧಗಂಗಾಮಠ.

ಆಧ್ಯಾತ್ಮಿಕ ಚಿಂತನೆ ಜೊತೆಗೆ ಸಾಮಾಜಿಕ ಪ್ರಜ್ಞೆ ಅವರಲ್ಲಿ ಅಂತರ್ಗತವಾಗಿದ್ದುದರಿಂದ ಶ್ರೀಮಠವನ್ನು ಆಧ್ಯಾತ್ಮಿಕ ಕೇಂದ್ರದ ಜೊತೆಗೆ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೂ ವಿಸ್ತರಿಸುವಂತೆ ಮಾಡಲು ಅವರಲ್ಲಿ ಸದಾ ತುಡಿಯುತ್ತಿದ್ದ ಕಾಳಜಿ, ಕಳಕಳಿ, ಮಾನವೀಯತೆ, ಹೃದಯ ವೈಶಾಲ್ಯತೆ ಕಾರಣವಾದವು.

ಶ್ರೀ ಉದ್ದಾನಶಿವಯೋಗಿಗಳ ಪೂರ್ವಾಶ್ರಮದ ತಂದೆ ತಾಯಿಗಳು ಶರಣ ಪಟೇಲ್ ಗಟ್ಟೆಪ್ಪ ತಾಯಿ ಶರಣೆ ಮರುಳ ಸಿದ್ಧಮ್ಮ. ಹುಟ್ಟಿದ ಊರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿಗೆ ಸೇರಿದ ಲಕ್ಕೂರು ಕೆಲವರು, ಹುಟ್ಟಿದೂರಿನಿಂದ ಪ್ರಖ್ಯಾತರಾಗುತ್ತಾರೆ. ಕೆಲವರು ಸಾಧನೆಯಿಂದ ಹುಟ್ಟಿದ ಊರು ಪ್ರಖ್ಯಾತವಾಗುತ್ತದೆ. ಎರಡನೇ ಗುಂಪಿಗೆ ಸೇರಿದವರು ಶ್ರೀ ಉದ್ದಾನಶಿವಯೋಗಿಗಳು.

ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ರುದ್ರಪ್ಪ ಹೆಸರಿಗೆ ತಕ್ಕಂತೆ ಅನ್ಯಾಯ ವಿರುದ್ಧ ಸಿಡಿದೇಳುವ, ಸತ್ಯ, ಪ್ರಾಮಾಣಿಕತೆಯನ್ನು ಜೀವನದ ಉಸಿರಾಗಿಸಿಕೊಂಡು ನೊಂದ ಹೃದಯಗಳ ಕಣ್ಣೀರೊರೆಸುವ ಮಾತೃ ಹೃದಯ. ಈ ಎಲ್ಲಾ ಗುಣಗಳು ಬಾಲ್ಯದೊಂದಿಗೆ ಬೆಳೆದುವು. ಪಟೇಲ್ ಗಟ್ಟೆಪ್ಪನವರದು ತುಂಬು ಕುಟುಂಬ. ಆರು ಗಂಡು, ನಾಲ್ಕು ಹೆಣ್ಣು, ರುದ್ರಪ್ಪ ಕುಟುಂಬದ ಕೊನೆಯ ಮಗ. ರುದ್ರಪ್ಪನ ಜನನದೊಂದಿಗೆ ಮನೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿತು. ಬರಿದಾಗಿದ್ದ ಕಣಜ ತುಂಬಿತು. ಬರಡಾಗಿದ್ದ ಹಸುಗಳು ಹಾಲು ಕೊಡಲಾರಂಭಿಸಿದವು. ಮನೆಯಲ್ಲಿ ಭಾಗ್ಯೋದಯ ವಾಯಿತು.

ರುದ್ರಪ್ಪ ಶಾಲೆಯಲ್ಲಿ ಕಲಿತುದಕ್ಕಿಂತ, ಶಾಲೆಯಿಂದ ಹೊರಗೆ ಕಲಿತಿದ್ದೇ ಹೆಚ್ಚು, ಲೋಕಾನುಭವ ಅವರ ಜೀವನದ ಶ್ರೀರಕ್ಷೆಯಾಯಿತು. ಬಾಲ್ಯದಿಂದಲೇ ಅವರಲ್ಲಿ ಶಿವಯೋಗ ನಿಷ್ಠೆ ಮೊಳಕೆಯೊಡೆದು ಸಸಿಯಾಗಿ ಬೆಳೆಯತೊಡಗಿತು. ಮಗ ಓದಲಿಲ್ಲವೆಂದು ಬೇಸರಗೊಂಡು ಮೇಕೆ ಕಾಯುವ ಕೆಲಸಕ್ಕೆ ನೇಮಿಸಿದರು. ಇದರಿಂದ ಬಾಲಕ ರುದ್ರಪ್ಪ ವಿಚಲಿತನಾಗಲಿಲ್ಲ. ಶಿವನ ಅನುಗ್ರಹವೆಂದೇ ಭಾವಿಸಿದರು. ಲಕ್ಕೂರಿಗೆ ಸ್ವಲ್ಪ ದೂರದಲ್ಲಿದ್ದ ಸಿದ್ಧರಬೆಟ್ಟಕ್ಕೆ (ನಿಜಗಲ್ ಬೆಟ್ಟ) ಹೋಗಿ ಮೇಕೆಗಳನ್ನು ಮೇಯಲು ಬಿಟ್ಟು ಸಹಚರರೊಂದಿಗೆ ಬಾಲ್ಯಕ್ಕೆ

* ನಂ. 1617, 'ಮಾತೃಶ್ರೀ' ಸರ್.ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, 8ನೇ ಬ್ಲಾಕ್, ಮುದ್ದಿನಪಾಳ್ಯ, ಬೆಂಗಳೂರು.





ಸಹಜವಾದ ಆಟಗಳಲ್ಲಿ ತೊಡಗದೆ ಒಂಟಿಯಾಗಿ ನಿಜಗಲ್ ಬೆಟ್ಟದಲ್ಲಿದ್ದ ಗವಿಯಲ್ಲಿ ಧ್ಯಾನಮಗ್ನರಾಗುತ್ತಿದ್ದರು. ರುದ್ರಪ್ಪನ ವರ್ತನೆಗಳು ಮನೆಯವರಿಗೆ, ಜೊತೆಗಾರರಿಗೆ ವಿಚಿತ್ರವಾಗಿ ಕಾಣಿಸಿತು. ಲೋಕದ ಕಣ್ಣಿಗೆ ವಿಚಿತ್ರವಾಗಿ ಕಂಡರೂ ಅವರೊಳಗೆ ಆಧ್ಯಾತ್ಮಿಕ ಶಕ್ತಿ ಗಟ್ಟಿಯಾಗುತ್ತಾ ಹೋಯಿತು.

ಒಮ್ಮೆ ಗಟ್ಟೆಪ್ಪನವರ ಮನೆಗೆ ತೇಜೋಮೂರ್ತಿಯಾದ ಜಂಗಮರು ಬಂದರು. ಮನೆಯವರು ಜಂಗಮಮೂರ್ತಿಯನ್ನು ಭಕ್ತಿಯಿಂದ ಬರಮಾಡಿಕೊಂಡರು. ಶಿವಪೂಜೆಗೆ ಸಕಲ ವ್ಯವಸ್ಥೆಯನ್ನು ಮಾಡಿದರು. ಶಿವಪೂಜೆಯನ್ನು ಮುಗಿಸಿ ಪ್ರಸಾದ ಸ್ವೀಕರಿಸಿ ಅಲ್ಲಿಂದ ಹೊರಡಲು ಸಿದ್ಧರಾದ ಜಂಗಮಮೂರ್ತಿಗಳು ತಮ್ಮ ಕೊನೆಯ ಮಗ ರುದ್ರಪ್ಪನನ್ನು ನೋಡಿಅವನ ವಿಚಿತ್ರ ನಡವಳಿಕೆಗಳನ್ನು ವಿವರಿಸಿ ಇವನು ಎಲ್ಲರಂತೆ ಆಗುವಂತೆ ಅನುಗ್ರಹಿಸಿ ಎಂದು ಬೇಡಿಕೊಂಡರು. ಜಂಗಮಮೂರ್ತಿಗಳು ಕ್ಷಣಕಾಲ ಮೌನವಾಗಿದ್ದು, ರುದ್ರಪ್ಪನನ್ನೇ ದಿಟ್ಟಿಸಿ ನೋಡಿದರು. ಹುಡುಗನ ದೃಷ್ಟಿಯೊಂದಿಗೆ ತಮ್ಮ ದೃಷ್ಟಿಯನ್ನು ಬೆರೆಸಿ 'ಇವನಿಗೆ ನಾನು ಆಶೀರ್ವದಿಸುವುದೇನಿದೆ, ಈತ ನಿಮ್ಮ ಮಗನಾಗಿರುವುದೊಂದು ನಿಮಿತ್ತ ಅಷ್ಟೆ ಇವನ ಉಜ್ವಲ ಭವಿಷ್ಯ ನಮ್ಮನ್ನು ಮೂಕ ವಿಸ್ಮಿತಗೊಳಿಸಿದೆ. ಅಸಾಧಾರಣ ತೇಜಸ್ವಿಯಾದ ಈತನು ನಡೆದುದೇ ಮಾರ್ಗ, ಆಡಿದುದೇ ಕ್ರೀಡೆ' ಎಂದು ನಕ್ಕು ಸುಮ್ಮನಾದರು. ಅವರ ಮಾತಿನ ಒಳಾರ್ಥವನ್ನು ಮನೆಯವರು ಅರ್ಥಮಾಡಿಕೊಳ್ಳಲಿಲ್ಲ. ಶಿವಯೋಗಿಗಳು ಹೊರಗೆ ಬರುವುದನ್ನೇ ಕಾಯುತ್ತ ನಿಂತಿದ್ದ ರುದ್ರಪ್ಪ ಅವರ ಕೈಯಲ್ಲಿರುವ ಪುಸ್ತಕವನ್ನು ಕೊಡುವಂತೆ ಕೇಳಿದ. ಅವನ ವರ್ತನೆಯಿಂದ ಶಿವಯೋಗಿಗಳಿಗೆ ಅಚ್ಚರಿಯಾಯಿತು. ಆಗ ಅವರು ಓದಿ ಅದರಂತೆ ನಡೆಯಬೇಕೆಂದು ಹೇಳಿ ಆಶೀರ್ವದಿಸಿ ಕೊಟ್ಟರು.

ಶಿವಯೋಗಿಗಳಿಂದ ಪಡೆದ ಆ ಕೃತಿಯನ್ನು ಆಸಕ್ತಿಯಿಂದ ಏಕಾಗ್ರತೆಯಿಂದ ಓದತೊಡಗಿದ. ಅದರೆ ಅವನ ವರ್ತನೆಯಲ್ಲಿ ಸಾಕಷ್ಟು ಬದಲಾವಣೆಗಳಾದವು. ಕೃತಿಯನ್ನು ಓದಲು ಪ್ರಾರಂಭಿಸಿದ ಕೆಲವೇ ವಾರಗಳಲ್ಲಿ ಮೇಕೆಯ ಮಂದೆಯಲ್ಲಿ ಒಂದು ಮೇಕೆಯನ್ನು ಮಾರಿ ಬಂದ ಹಣವನ್ನು ತೆಗೆದುಕೊಂಡು ಸ್ವಯಂಪ್ರೇರಿತನಾಗಿ ಮಾಗಡಿ ತಾ॥ ಗುಂಡಿಗೆರೆಗೆ ಹೋಗಿ ಅಲ್ಲಿನ ಮಠದಲ್ಲಿ ಶಿವದೀಕ್ಷೆ ಸಂಸ್ಕಾರ ಮಾಡಿಸಿಕೊಂಡು ಬಂದನು. ದಿನಕಳೆದಂತೆ ರುದ್ರಪ್ಪನ ಪೂಜಾನಿಷ್ಠೆ ಸೇವಾಮನೋಭಾವ ಅಧಿಕಗೊಂಡಿತು. ಅವನಲ್ಲಿ ಆಗುತ್ತಿರುವ ಬದಲಾವಣೆಯನ್ನು ಕಂಡು ಮನೆಯವರಿಗೆ ಆಶ್ಚರ್ಯವಾಯಿತು. ರುದ್ರಪ್ಪನಿಗೆ ಅರಿವಿಲ್ಲ ದೆಯೇ ಅವನಲ್ಲಿ ಶಿವಸಂಸ್ಕಾರ ಸಂಪತ್ತಿನ · ಅಪೂರ್ವ ತೇಜೋರಾಶಿ ಬೆಳೆಯತೊಡಗಿತು. ಶಿವಯೋಗದ ಅಪಾರ ಕಳೆ ಚಿಗುರೊಡೆದು ಹೆಮ್ಮರವಾಗತೊಡಗಿತು. ಮುಂದೆ ಮಹಾಶಿವಯೋಗಿಯಾಗುವ ಎಲ್ಲಾ ಲಕ್ಷಣಗಳು ಕಾಣಿಸ ತೊಡಗಿದವು.

ಕೆಲವು ಅಹಿತಕರ ಘಟನೆಗಳಿಂದ ಮನನೊಂದ ರುದ್ರಪ್ಪ ಇನ್ನು ಮನೆಯಲ್ಲಿರುವುದರಲ್ಲಿ ಯಾವ ಅರ್ಥವೂ ಇಲ್ಲ ಎಂದು ನಿಶ್ಚಯಿಸಿ ಹಿಂದೆ ಹಲವಾರು ಬಾರಿ ಬಂದು ಹೋಗಿದ್ದ ಸಿದ್ಧಗಂಗೆಯೇ ನನಗೆ ಸರಿಯಾದ ಸ್ಥಳ ಎಂದು ಭಾವಿಸಿ ಮನೆಯಲ್ಲಿ ಯಾರಿಗೂ ಹೇಳದೆ ಸಿದ್ಧಗಂಗೆಗೆ ಹೋದನು. ಶ್ರೀಮಠದಲ್ಲಿ ಶಿವಯೋಗಾನುಷ್ಠಾನ ಮಾಡುತ್ತಿದ್ದ ಶ್ರೀ ಅಟವೀ ಸ್ವಾಮಿಗಳವರ ಕಣ್ಣಿಗೆ ಬಿದ್ದು ಅವರ ಗುರುಕೃಪೆಗೆ ಪಾತ್ರನಾದ.

ಗುರುಕಾರುಣ್ಯದಂಗಳದಲ್ಲಿ ತಮ್ಮ ಜೀವನದ ಹಾದಿಯನ್ನು ರೂಪಿಸಿಕೊಂಡ ರುದ್ರಪ್ಪ ಶ್ರೀ ಉದ್ದಾನಶಿವಯೋಗಿಗಳಾಗಿ, ಗುರುಗಳೇ ನಿಬ್ಬೆರಗಾಗುವಂತೆ ಇಹ–ಪರಗಳೆರಡರಲ್ಲೂ ಗೆಲ್ಲುವ ಮಹಾಮಹಿಮರಾಗಿ ಬೆಳೆದರು. ಶ್ರೀಮಠದಲ್ಲಿ ಕಾಯಕ–ದಾಸೋಹಕ್ಕೆ ಭಾಷ್ಯ ಬರೆದವರು ಲೋಕದ ಕಣ್ಣಿನಲ್ಲಿ ಪವಾಡ ಪುರುಷರಾಗಿ ಕಂಗೊಳಿಸಿದರು. ಶ್ರೀ ಅಟವೀಸ್ವಾಮಿಗಳು ಶಿವನಲ್ಲಿ ಒಂದಾದ ನಂತರ ಶ್ರೀಮಠದ ಉತ್ತರಾಧಿಕಾರಿಗಳಾಗಿ ಶ್ರೀಕ್ಷೇತ್ರದ ಗುರುಪರಂಪರೆಯಲ್ಲಿ ಸೇರ್ಪಡೆಯಾದರು.

ಗುರುಪರಂಪರೆಯ ಅನುಗ್ರಹದಿಂದ ಅನ್ನದಾಸೋಹವನ್ನು ಪ್ರಾರಂಭಿಸಿ ಜನತೆಯ ಮನಸ್ಸನ್ನು ಸೂರೆಗೊಂಡರು. ಶ್ರೀ ಶಿವಯೋಗಿಗಳ ಯೋಗನಿಷ್ಠೆ, ತತ್ವಶಾಸ್ತ್ರ, ಔದಾರ್ಯ, ಸರಳಜೀವನ, ತ್ಯಾಗಶೀಲತೆ, ಸರ್ವಸಮತಾಭಾವ ಮತ್ತು ಕ್ರಿಯಾಸಿದ್ಧಿ ಇವೇ ಮೊದಲಾದ ಗುಣಗಳು ಭಕ್ತರನ್ನು ಸೂಜಿಗಲ್ಲಿನಂತೆ ಆಕರ್ಷಿಸತೊಡಗಿದವು.

ಶ್ರೀ ಉದ್ದಾನಶಿವಯೋಗಿಗಳು ಹೆಚ್ಚು ವಿದ್ಯಾವಂತರಲ್ಲದಿದ್ದರೂ ವೇದಾಧಿ ಧರ್ಮ ಶಾಸ್ತ್ರಗಳಲ್ಲಿ ಅಪರಿಮಿತವಾದ

## ಸ್ಮರಣೆ

ಶ್ರೇಷ್ಠ ವಿದ್ವಾಂಸರಲ್ಲಿ ಅತಿಶಯವಾದ ವಿಶ್ವಾಸ, ಲೋಕಾನುಭವವೇ ಅವರಿಗೆ ಎಲ್ಲವನ್ನೂ ಕಲಿಸಿಕೊಟ್ಟಿತು. 'ಪರೋಪಕಾರ'ವೆಂಬುದು ಅವರ ಜೀವನದ ಸಾರಸರ್ವಸ್ವ 'ಊಟಮಾಡಿರಿ' ಎಂಬುದು ಅವರ ದಿವ್ಯ ಪಂಚಾಕ್ಷರಿಯ ಮಂತ್ರ. ಭೂತತೃಪ್ತಿಯೇ ಅವರ ಅಂತರಾತ್ಮನ ಅಂತರ್‌ಜ್ಯೋತಿ. ಅವರ ಆದರ್ಶ ಜೀವನವು ಮಾನವಲೋಕದ ತಾರಕ ಮಂತ್ರ.

ಪೂಜ್ಯ ಉದ್ದಾನಶಿವಯೋಗಿಗಳು ಶ್ರೀಮಠದಲ್ಲೇ ಅನೇಕ ಲೋಕೋತ್ತರ ಕಾರ್ಯಗಳಿಗೆ ಅಡಿಪಾಯ ಹಾಕಿದರು. ಶಿವ ರಾತ್ರಿ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯನ್ನು ಪ್ರಾರಂಭಿಸಿ, ದನಗಳ ಜಾತ್ರೆ ನಡೆಯುವಂತೆ ಮಾಡಿದರು. ಜಾತ್ರಾ ಸಂದರ್ಭದಲ್ಲಿ ಮಠಕ್ಕೆ ಬರುವ ಸಹಸ್ರಾರು ಭಕ್ತರಿಗೆ ಮಠದಿಂದಲೇ ದಾಸೋಹವನ್ನು ನಡೆಸುವ ಅದ್ಭುತ ಕಾರ್ಯವನ್ನು ಆರಂಭಿಸಿದ ಹೆಗ್ಗಳಿಕೆಗೆ ಭಾಜನರಾದರು. ಶ್ರೀಮಠವನ್ನು ಒಂದು ಮುಕ್ತ ನ್ಯಾಯಾಲಯವನ್ನಾಗಿ ಕಟ್ಟಿ ಬೆಳೆಸಿದರು. 'ಮಠವೆಂಬುದು ಘಟದಿಂದ' ಎಂಬುದನ್ನು ಪ್ರತ್ಯಕ್ಷ ತೋರಿಸುತ್ತಾ ನಡೆದರು. ಉಚಿತ ವಿದ್ಯಾರ್ಥಿ ನಿಲಯ ತೆರೆದು ಓದಬೇಕೆಂಬ ಬಯಕೆಯಿಂದ ಬಂದವರಿಗೆ ಆಶ್ರಯ ನೀಡಿ ಬಯಕೆ ಚಿಗುರೊಡೆದು ಸಸಿಯಾಗಿ ಬೆಳೆಯುವಂತೆ ಮಾಡಿದರು.

ಪೂಜ್ಯ ಶಿವಯೋಗಿಗಳು ಲೋಕದ ದೃಷ್ಟಿಯಲ್ಲಿ 'ವಜ್ರಾದಪಿ ಕಠೋರಾಣಿ' ಯಂತೆ ಕಂಡರೂ ಅವರನ್ನು ನೋಡಿದವರಿಗೆ 'ಮೃದೂನಿ ಕುಸುಮಾದಪಿ'ಯಾಗಿ ಕಂಡರು. ಬಸವಾದಿ ಶರಣರ ಕಾಯಕ-ದಾಸೋಹ ತತ್ವವನ್ನು ಆಚರಣೆಗೆ ತಂದ ಸದ್ಭಾವಿಗಳು. ಶಿವಯೋಗ ಸಾಧನೆಯ ಶಿವಕಳಸವಾದರು. ತಮ್ಮ ಉತ್ತರಾಧಿಕಾರಿಯನ್ನಾಗಿ 'ಶ್ರೀ ಮರುಳಾರಾಧ್ಯರ'ರನ್ನು ನೇಮಿಸಿದರು. ಆದರೆ ಶಿವನಿಚ್ಛೆಯನ್ನು ಬಲ್ಲವರಾರು! ವಿಧಿ ಲೀಲೆಯ ಮುಂದೆ ವ್ಯಕ್ತಿ ತೃಣಸಮಾನ. ಶ್ರೀ ಮರುಳಾರಾಧ್ಯರು ಉತ್ತರಾಧಿಕಾರಿಯಾದ ಸ್ವಲ್ಪಕಾಲದ ನಂತರ ಶಿವನೊಳಗೊಂದಾದರು. ಅವರ ಕ್ರಿಯಾ ಸಮಾಧಿ ನಡೆಯಿತು. ಶ್ರೀ ಮರುಳಾರಾಧ್ಯರ ಆತ್ಮೀಯರಾಗಿದ್ದ ಶಿವಣ್ಣನವರು ಸಮಾಧಿ ಪ್ರಕ್ರಿಯೆ ಕೇಂದ್ರವ್ಯಕ್ತಿಯಾಗಿದ್ದರು. ಆ ವೇಳೆಗಾಗಲೇ ಭಕ್ತರ ಮನಸ್ಸಿನಲ್ಲಿ ಮುಂದಿನ ಉತ್ತರಾಧಿಕಾರಿ ಯಾರು ಎಂಬ ಚಿಂತೆ ಕಾಡತೊಡಗಿತ್ತು. ಶ್ರೀ ಉದ್ದಾನಶಿವಯೋಗಿಗಳಲ್ಲೂ ಈ ಬಗ್ಗೆ ಮನಸ್ಸಿನಲ್ಲಿಯೇ ಚಿಂತನೆ ನಡೆದಿತ್ತು. ಚಿಂತನೆಗೆ ಉತ್ತರ ದೊರೆಕಿದಂತಾಗಿ ತಮ್ಮ ಕಂಚಿನ ಕಂಠದಿಂದ 'ಶಿವಣ್ಣನವರೇ ನೀವು ಈ ಮಠದ ಉತ್ತರಾಧಿಕಾರವನ್ನು ವಹಿಸಿಕೊಂಡು ಸಿದ್ಧಲಿಂಗೇಶ್ವರರ ಪ್ರತಿನಿಧಿಯಾಗಿ ಇತೋಪಶಯವಾಗಿ ಈ ದಾಸೋಹಕ್ಷೇತ್ರದ ಗುರುತರವಾದ ಹೊಣೆಗಾರಿಕೆಯನ್ನು ವಿಶೇಷ ಶಕ್ತಿ ಸಾಮರ್ಥ್ಯದಿಂದ ನಡೆಸಿಕೊಂಡು ಹೋಗಬೇಕೆಂಬುದು ಸಮಸ್ತ ಭಕ್ತರ ಅಭಿಲಾಷೆ. ಸಿದ್ಧಲಿಂಗೇಶ್ವರರ ಆಜ್ಞೆ ನಮ್ಮ ಇಚ್ಛೆ. ಯಾವುದನ್ನು ಯೋಚಿಸದೆ ನಮಸ್ಕಾರ ಹಾಕಿಬಿಡಿ' ಎಂದರು. ಈ ಅನಿರೀಕ್ಷಿತ ನುಡಿಯನ್ನು ಕೇಳಿ ಎಲ್ಲರೂ ಕ್ಷಣಕಾಲ ದಿಗ್ಭ್ರಾಂತರಾದರು. ಶ್ರೀ ಶಿವಣ್ಣನವರು ಮರು ನುಡಿಯದೆ ಶ್ರೀಮಠದ ಸೇವೆಗೆ ತಮ್ಮನ್ನು ಅರ್ಪಿಸಿಕೊಳ್ಳಲು ಸಮ್ಮತಿಸಿದರು. ದಿನಾಂಕ ೦೩-೦೩-೧೯೩೦ರಂದು ವಿದ್ಯುಕ್ತವಾಗಿ ಶ್ರೀ ಶಿವಕುಮಾರಸ್ವಾಮಿಗಳಾಗಿ 'ನಿರಂಜನ ಪಟ್ಟಾಧಿಕಾರ'ವನ್ನು ನೀಡಿ ಆಶೀರ್ವದಿಸಿದರು. ಶ್ರೀ ಶಿವಕುಮಾರ ಸ್ವಾಮಿಗಳು ತಮ್ಮ ಗುರುಗಳ ಮಾರ್ಗದರ್ಶನದ ಮುಂಬೆಳಕಿನಲ್ಲಿ ನಡೆದು ಶ್ರೀಮಠವನ್ನು ಅಭಿವೃದ್ಧಿಪಥದಲ್ಲಿ ಮುನ್ನಡೆಸಿದುದು, ಮುನ್ನಡೆಸುತ್ತಿರುವುದು ಒಂದು ಇತಿಹಾಸ.

೧೯೪೧ರ ಜನವರಿ ೧೧ರಂದು ಶ್ರೀ ಉದ್ದಾನಶಿವ ಯೋಗಿಗಳು

> **ಬಯಲು ಬಯಲನೆ ಬಿತ್ತಿ**
> **ಬಯಲು ಬಯಲನೆ ಬೆಳೆದು**
> **ಬಯಲು ಬಯಲಾಗಿ ಬಯಲಾಯಿತ್ತಯ್ಯ**
> **ಬಯಲ ಜೀವ ಬಯಲ ಭಾವನೆ**
> **ಬಯಲು ಬಯಲಾಗಿ ಬಯಲಾಯಿತ್ತಯ್ಯ**

ಎಂಬಂತೆ ಶಿವನಲ್ಲಿ ಒಂದಾದರು. ಅವರು ಭೌತಿಕವಾಗಿ ಕಣ್ಮರೆಯಾದರು. ಅವರೊಳಗಿನ ಚೈತನ್ಯ, ಶ್ರೀಮಠದಲ್ಲಿದ್ದುಕೊಂಡು ತಮ್ಮ ಶಿಷ್ಯನನ್ನು ಅನುಗ್ರಹಿಸುತ್ತಿವೆ. ಶ್ರೀಮಠದ ಭವ್ಯಪರಂಪರೆಯಲ್ಲಿ ಶ್ರೀ ಉದ್ದಾನಶಿವಯೋಗಿಗಳವರು ಜ್ಯೋತಿಸ್ವರೂಪರಾದರು. ಅವರ ಆತ್ಮಜ್ಯೋತಿ ಪರಂಜ್ಯೋತಿಯಲ್ಲಿ ಲೀನವಾಗಿ ಶ್ರೀಮಠದ ಲೋಕಕಲ್ಯಾಣಕಾರ್ಯಗಳಿಗೆ ನಿರಂತರವಾಗಿ ಬೆಳಕು ನೀಡುತ್ತಿದೆ. ಪ್ರತಿವರ್ಷ ಜನವರಿಯ ಸಂಕ್ರಾಂತಿಯಂದು ಶ್ರೀಮಠದಲ್ಲಿ ಶ್ರೀ ಉದ್ದಾನಶಿವಯೋಗಿಗಳವರ ಪುಣ್ಯಾರಾಧನೆಯನ್ನು ಸಾಂಸ್ಕೃತಿಕಹಬ್ಬವಾಗಿ ಪೂಜ್ಯರು ನಡೆಸಿಕೊಂಡು ಬರುತ್ತಿದ್ದಾರೆ.

❖



## ನುಡಿನಮನ

# 'ಪಂಚ ಶಕ್ತಿಗಳ ಸಂಯುಕ್ತ ಸಾಕಾರಮೂರ್ತಿಯೇ ಶ್ರೀ ಶಿವಕುಮಾರಸ್ವಾಮಿಗಳು

('ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿ ಸ್ವೀಕರಿಸಿ ಆಡಿದ ಮಾತುಗಳು

–ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪ *

ಎಲ್ಲಾ ಅನುಕೂಲಗಳಿದ್ದು ಉಸಿರು ಕಟ್ಟಿಸುವಂತಿದ್ದ, ಶ್ರೀ ರಾಮಕೃಷ್ಣ ಮಠ ಬಿಟ್ಟೂ, ಶ್ರೀ ಸಿದ್ಧಗಂಗಾಮಠಕ್ಕೆ ಬಂದುಬಿಟ್ಟೆ. ಮಠದಲ್ಲಿ ನಾನಾಯಿತು ನನ್ನ ಕೆಲಸವಾಯಿತು. ಯಾರಿಗೂ ಬಗ್ಗದ ಅಂದು ನಾನು ಮಠದ ಬಡ ವಿದ್ಯಾರ್ಥಿ. ಇಂದೂ ಒಬ್ಬ ಒರಟು ಮೇಷ್ಟ್ರು. ಶ್ರೀಯವರು ಎಂದೂ ನನ್ನನ್ನು ಹೊರಗಿನವನೆಂದು ಕಾಣಲಿಲ್ಲ, ಒಳಗಿನವನಂತೆಯೇ ನಡೆಸಿಕೊಂಡರು.

ಮಠದಲ್ಲಿದ್ದ ಅವಧಿಯ ಎರಡು ಪ್ರಸಂಗಗಳನ್ನು ನಾನು ಎಂದಿಗೂ ಮರೆಯುವಂತಿಲ್ಲ. ನಾನು ದಿನವೂ ಒಪ್ಪತ್ತು ಊಟ ಮಾಡಿ, ಕೆಲಸ ಮಾಡುತ್ತಿರುವುದು ಹೇಗೋ ಶ್ರೀ ಅವರ ಗಮನಕ್ಕೆ ಬಂದು, ಹಳೆಯ ಮಠದಲ್ಲಿಯೇ ನಿತ್ಯ ಬೆಳಿಗ್ಗೆ ಪ್ರಸಾದಕ್ಕೆ ವ್ಯವಸ್ಥೆ ಮಾಡಿದರು. ದಿನವೂ ಶ್ರೀ ಅವರ ದರ್ಶನ ಒದಗಿತು. ಮತ್ತೊಂದು ನೋವಿನ ಪ್ರಸಂಗ. ವಿಷ ಕುಡಿದ ಮಠದ ಹುಡುಗನ ಪ್ರಾಣ ಉಳಿಸುವ ದವಗಿನಲ್ಲಿ. ಅವನನ್ನ ತಕ್ಷಣವೇ ಹೆಗಲ ಮೇಲೆ ಹಾಕಿಕೊಂಡು, ಒಬ್ಬನೇ ತುಮಕೂರಿನ ಸರ್ಕಾರಿ ಆಸ್ಪತ್ರೆಗೆ ಹೋದರೂ, ಪ್ರಯೋಜನವಾಗದೆ ಮತ್ತೆ ಹೆಣವನ್ನು ಹೆಗಲ ಮೇಲೆ ಹೊತ್ತು ಬಂದು, ಮಠದ ಬೆಟ್ಟದ ಬುಡದಲ್ಲಿ ಮಣ್ಣು ಮಾಡಿದ್ದು, ಸತ್ತ ಹುಡುಗ ಮಠದ ಮೇಷ್ಟ್ರು ವೀರಣ್ಣನವರ ತಮ್ಮ. ಈ ಎರಡು ಪ್ರಸಂಗಗಳು ಇಂದಿಗೂ ನನ್ನನ್ನು ಕಾಡುತ್ತಿವೆ. ನಿರ್ಗತಿಕರೂ, ನಿಕೃಷ್ಟರೂ, ಸಮಾಜ ವಂಚಿತ ದುರ್ಬಲ ಅನಾಥ ಮಕ್ಕಳು, ಬದುಕನ್ನು ರೂಪಿಸಿಕೊಳ್ಳುವುದಕ್ಕೆ ಆಶ್ರಯಕೊಟ್ಟ ಮಠದ ಅನಾಥಾಲಯದ ನನ್ನ ಅನುಭವವಂತೂ ಎಂದೂ ಮರೆಯಲಾಗದು. ಇಂದಿಗೂ ನನ್ನ ಬದುಕು, ಕನಿಷ್ಠ ಅವಶ್ಯಕತೆಗಳಿಗೆ ಮಿತಗೊಂಡು, ಬಡತನಕ್ಕೆ ತಳಕು ಹಾಕಿಕೊಂಡು ನೆಮ್ಮದಿಗೆ ನೆಲೆಯಾಗಿದೆ.

ಶ್ರೀ ಸಿದ್ಧಗಂಗಾ ಮಠ ಎಲ್ಲಾ ಮಠಗಳಿಗಿಂತಲೂ ಭಿನ್ನವಾದುದು ಮತ್ತು ವಿಶಿಷ್ಟವಾದುದು. ಅದರಿಂದಲೇ ಈ ಮಠ ಎಂದೂ ಗುರು-ವಿರಕ್ತ ಸಂಘರ್ಷದ ಸುಳಿಯಲ್ಲಿ ಸಿಕ್ಕಲಿಲ್ಲ. ಮೇಲುನೋಟಕ್ಕೆ ಗುರು-ವಿರಕ್ತರ ಕಟ್ಟು ಕಟ್ಟಳೆಗೆ ಬದ್ಧವಾದಂತೆ ಕಂಡರೂ, ಆಂತರ್ಯದಲ್ಲಿ ಗುರು-ವಿರಕ್ತ ಸಂಪ್ರದಾಯ ಮೀರಿ, ತನ್ನದೇ ಆದ ವಿಶಿಷ್ಟ ಸಂಪ್ರದಾಯ ಮತ್ತು ಪರಂಪರೆಯನ್ನು ರಕ್ಷಿಸಿಕೊಂಡು ಬರುತ್ತಿದೆ. ಸಿದ್ಧಗಂಗೆ ಮಠಕ್ಕೆ ಮಂಡೆ ಮುಡಿಕೊಟ್ಟು ನಡೆದುಕೊಳ್ಳುವ ಮೀಸಲಾತಿ ಒಕ್ಕಲು ಅಪರೂಪ. ಹಿಂದಿನಿಂದಲೂ ಈ ಮಠಕ್ಕೆ ಎಲ್ಲಾ ಜಾತಿಯ ಪಂಗಡಗಳು ನಡೆದುಕೊಳ್ಳುತ್ತವೆ. ಅಪಾರ ಸಂಖ್ಯೆಯ ಅವರುಗಳೇ ಈ ಮಠದ ಭಕ್ತರು ಮತ್ತು ಒಕ್ಕಲು. ಇದೊಂದು ಶಿವಭಕ್ತರ ಮಠ ಅಷ್ಟೆ. ಇದು ಗ್ರಾಮೀಣ ಶ್ರಮಿಕರು ಕಟ್ಟಿರುವ ಶ್ರೀಸಾಮಾನ್ಯರ ಮಠ. ಇಂದಿಗೂ ಮಠದ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಆಚರಣೆಗಳಲ್ಲಿ ಗ್ರಾಮೀಣ ಸಂಸ್ಕೃತಿಯ ಸೊಗಡು ಎದ್ದು ಕಾಣುತ್ತದೆ. ಇದು ಗ್ರಾಮೀಣ ಶ್ರಮ ಸಂಸ್ಕೃತಿಯ ದೀಕ್ಷಾಮಠವೇ ಹೊರತು, ಲಿಂಗಾದೀಕ್ಷಾ ಮಠವಲ್ಲ. ಲೋಕಸಾಧನೆಯಿಂದಲೇ ಆತ್ಮಸಾಧನೆ ಎಂಬ ಮೂಲಮಂತ್ರ ಈ ಮಠದ್ದು. ಯಾರೇ ಆಗಲಿ 'ದುಡಿಯಲ್ಲಿ ಮತ್ತು ತಿನ್ನಲಿ'- ಈ ಮಠದ ತತ್ತ್ವ ಮತ್ತು ಸಿದ್ಧಾಂತ. ಶ್ರೀಯವರು ಸಾಧಿಸಿರುವ ಮತ್ತು ಸಾಗಿಸುತ್ತ ಬಂದಿರುವ. ಅವರ ಕಠಿಣ ಬದುಕೇ ಇದಕ್ಕೆ ಸಾಕ್ಷಿ. ಮಠದ ಕಟ್ಟಡಗಳ ಪ್ರತಿಯೊಂದು ಕಲ್ಲು ಮತ್ತು ಇಟ್ಟಿಗೆಗಳು ಶ್ರೀ ಅವರ ಚಾರಿತ್ರ ಮತ್ತು ಚರಿತ್ರೆಯನ್ನು ಸಾರುತ್ತವೆ.

ಶ್ರೀ ಸಿದ್ಧಗಂಗಾ ಮಠ ಪಂಚಶಕ್ತಿ ಕೇಂದ್ರಗಳ ಒಂದು ಸಮುಚ್ಚಯ ಮೊದಲನಯದೇ **ಬೆಟ್ಟದ ಮೇಲಿನ ಗಂಗೆ, ರಸಗಂಗೆ, ಸಿದ್ಧರಸ. ಚೇತನ ಮತ್ತು ಅಚೇತನಗಳಲ್ಲಿ ಸುಪ್ತವಾಗಿ ಹರಿದಾಡುವ ರಸಶಕ್ತಿ. ಎರಡನೆಯದು ಎಂದೂ ಆರದ ಒಲೆಯ ಅಗ್ನಿ. ಅದು ಯೋಗಾಗ್ನಿ, ಧಾತ್ವಗ್ನಿ ಮತ್ತು**

* 73, ಅಪೂರ್ವ, 5ನೇ ಮುಖ್ಯರಸ್ತೆ ಮಾರುತಿ ಹೆಚ್.ಬಿ.ಸಿ.ಎಸ್. ಬಡಾವಣೆ, ಗುರುಪ್ಪನಪಾಳ್ಯ, ಬಿ.ಟಿ.ಎಂ. ಮೊದಲೇ ಹಂತ, ಬೆಂಗಳೂರು.

**ಸಾಧುಸಂತರು ಸತತವಾಗಿ ಸಾಧನೆಗೆ ರಕ್ಷಿಸಿ ರಕ್ಷಿಸಿಕೊಂಡು ಬರುವ ಧುನೀ ಪವಿತ್ರ ಅಗ್ನಿ, ಮೂರನೆಯದು ಹಳೆಯ ಮಠ, ಅದು ವಿಶಿಷ್ಟ ಗುರು ಪರಂಪರೆಯ, ಗುರು-ವಿರಕ್ತ ಸಂಪ್ರದಾಯ ಮೀರಿದ, ಉದ್ದಾನಸ್ವಾಮಿಗಳು ಪುನರುಜ್ಜೀವನ ಗೊಳಿಸಿರುವ, ಸಿದ್ಧಗುರು ವಂಶಾವಳಿಯ ಪರಂಪರೆಯದು. ನಾಲ್ಕನೆಯದು ಯಂತ್ರ-ಮಂತ್ರ, ಕಟ್ಟು ಕಟ್ಟಳೆಯ ವಿಧಿಯ ಮಂಚ, ರಕ್ಷಾವಲಯ, ಒಂದು ಶಕ್ತಿ ಕೇಂದ್ರ, ಐದನೆಯದು ಉದ್ದಾನಸ್ವಾಮಿಗಳು ಪೌರ್ಣಮಿ-ಅಮಾವಾಸ್ಯೆ ದಿನಗಳಂದು ಕಣ್ಮರೆಯಾಗಿ, ಪಕ್ಕದ ಬೆಟ್ಟದ ಗುಹೆಯಲ್ಲಿ ನಡೆಸುತ್ತಿದ್ದ ರಹಸ್ಯ ಸಾಧನೆಯ ಗುಪ್ತ ಗುಹೆ. ಈ ಪಂಚಶಕ್ತಿಗಳ ಸಂಯುಕ್ತ ಸಾಕಾರಮೂರ್ತಿಯೆ ಶ್ರೀ ಶಿವಕುಮಾರಸ್ವಾಮಿಗಳು.** ಅವರ ಲೌಕಿಕ ಸಾಧನೆಯಲ್ಲಿ ಅರೆಕೊರೆಗಳು, ಏಳು ಬೀಳುಗಳು ಘಟಿಸಿದರೂ, ಆಧ್ಯಾತ್ಮಿಕ ಸಾಧನೆಯಲ್ಲಿ ಪರಿಹರಿಸಿ ರಕ್ಷಿಸುವ ಶಕ್ತಿಗಳು.

ಶಿವಗಂಗೆಯಲ್ಲಿ ಗಂಗೆ ತೀರ್ಥವಾಯಿತು. ಒಳಕಲ್ಲ ತೀರ್ಥ. ಸಿದ್ಧಗಂಗೆಯಲ್ಲಿ ಗಂಗೆ ಸಿದ್ಧರಸವಾಯಿತು. ಕರ್ನಾಟಕದಲ್ಲಿ ಶೈವ ಮತ್ತು ವೀರಶೈವ ಪೂರ್ವ ಪಂಥಗಳ ಅಧ್ಯಯನ ಸರಿಯಾದ ಮಾರ್ಗದಲ್ಲಿ ನಡೆದಿಲ್ಲ. ಅದಕ್ಕೆ ಗುರು-ವಿರಕ್ತ ಸಂಘರ್ಷವೇ ಸಾಕ್ಷಿ. ಪಾಶುಪತ, ಕಾಪಾಲಿಕ ಮತ್ತು ಕಾಳಾಮುಖ ಮತಗಳಿಗೆ ಸಿದ್ಧಸಂಪ್ರದಾಯವೇ ಮೂಲ. ಸಿದ್ಧರಲ್ಲಿ ರಸಸಿದ್ಧರು, ನಾಥಸಿದ್ಧರು ಮತ್ತು ಮಾಹೇಶ್ವರ ಸಿದ್ಧರು ಮುಖ್ಯಧಾರೆಗಳು. ಸಿದ್ಧರಲ್ಲಿ ದಿವ್ಯ ಸಿದ್ಧರು (ವಿದ್ಯಾಧರರು) ಪರಿಪೂರ್ಣ ಸಿದ್ಧರು(ಆ ಜನ್ಮ ಸಿದ್ಧರು) ಮತ್ತು ಸಿದ್ಧಿಸಾಧಕ ಸಿದ್ಧರು. ರಸಸಿದ್ಧರದು ಬಂಗಾಳ, ನಾಥ ಸಿದ್ಧರದು ಉತ್ತರ, ಮಾಹೇಶ್ವರ ಸಿದ್ಧರದು ದಕ್ಷಿಣ ಭಾರತ. ಕಾಶ್ಮೀರಿ ಶೈವ ಮತ್ತು ತಮಿಳು ಶೈವದಲ್ಲಿ ಸಿದ್ಧರ ವಿಸ್ತಾರವಾದ ಪ್ರಸ್ತಾಪವಿದೆ. ಕರ್ನಾಟಕ ಸಿದ್ಧರ ಅಧ್ಯಯನ ಅಸಡ್ಡೆಗೆ ಒಳಗಾಗಿದೆ. ತಂತ್ರ-ಮಂತ್ರ ಎಂದರೆ ಪಂಚ ತತ್ತ್ವಗಳ ಸಾಧನೆ ಎಂಬ ತಪ್ಪು ತಿಳುವಳಿಕೆಯೇ ಇದಕ್ಕೆ ಕಾರಣ. ತಂತ್ರದಲ್ಲಿ ಅನೇಕ ಒಳಪಂಥಗಳಿವೆ. ಅದು ಸಹಜ ಮಾರ್ಗ. ಅಲ್ಲಮನ ಹೆಸರು ರಸಸಿದ್ಧರಲ್ಲಿ ಚರ್ಚಿತ ವಾಗಿದೆ. ಆರೂಢ ಪಂಥವೂ ಸಿದ್ಧ ಸಂಪ್ರದಾಯದ ಒಂದು ಒಳಪಂಥ. ಸಿದ್ಧ ಹೆಸರಿನ ಬೆಟ್ಟಗಳು, ಗುಹೆ ಮತ್ತು ಗುಪ್ತ ಸ್ಥಳಗಳು. ಸಿದ್ಧ ಸ್ವಯಂ ಭೂಗಂಗೆಗಳು, ಸಿದ್ಧ, ಸಿದ್ಧೇಶ್ವರ, ಸಿದ್ಧಲಿಂಗ ದೇವಾಲಯಗಳು ಸಿದ್ಧ ಪರಂಪರೆಯ ಕುರುಹು ಗಳೇ ಆಗಿವೆ. ವಿಚಾರವಾದಿಗಳು ಪ್ರಶ್ನಿಸುವ, ವಿಚಾರ ಚಿಂತನಶೀಲರೂ ಆಗಿರುವ ಶ್ರೀ ಶಿವಕುಮಾರಸ್ವಾಮಿಗಳ ವರಿಗೆ ಯಂತ್ರ-ಮಂತ್ರ, ಕಟ್ಟು-ಕಟ್ಟಳೆಯ ಸಾಧಕ ಶಕ್ತಿ ಕರಗತವಾಗಿರುವುದಾದರೂ ಹೇಗೆ? ಶ್ರೀ ಶಿವಕುಮಾರಸ್ವಾಮಿ ಗಳು ತಂತ್ರ ಸಾಧಕರಲ್ಲ, ಮಂತ್ರಸಾಧಕರು. ಅದು ಅವರಿಗೆ ಉದ್ದಾನಸ್ವಾಮಿಗಳ ಮನಿಸಿದ ನೆಪದಲ್ಲಿ ಅನುಗ್ರಹವಾಗಿರುವ, ಸಿದ್ಧಪರಂಪರೆಯ ಗುಪ್ತಸಿದ್ಧಿ. ಸಿದ್ಧಗಂಗೆಯ ಆಳವಾದ ಅಧ್ಯಯನದಿಂದ ಅನೇಕ ರಹಸ್ಯಗಳು ಬಿಚ್ಚಿಕೊಳ್ಳುವುದು ಸಾಧ್ಯ. ಸಿದ್ಧಗಂಗೆ ತಪಸ್ವಿಗಳು, ಸಾಧುಸಂತರ ಮಾರ್ಗ ಮಧ್ಯದ ತಂಗುದಾಣ ಎನ್ನುವ ಕಟ್ಟುಕತೆ, ಸಿದ್ಧಗಂಗೆಯನ್ನು ಕೀಳರಿಮೆಗೊ, ಆನಂತರದ 'ಮಿಥ್'ಗಳು ಮೇಲರಿಮೆಗೆ ಸಂಸ್ಕೃತೀಕರಣಗೊಂಡ ಸೃಷ್ಟಿಗಳು ಈ ಮೇಲರಿಮೆ ಕೀಳರಿಮೆಗೆ ಮೀರಿದ ಸ್ವತಂತ್ರವಾದ ಸಿದ್ಧ ಪರಂಪರೆ ಸಿದ್ಧಗಂಗೆಯದು. ಸಿದ್ಧಗಂಗೆಯಲ್ಲಿ ಭೈರವನ ಒಂದೂ ಕುರುಹು ಇಲ್ಲದೆ ಕಾಲಭೈರವನ ಸ್ತೋತ್ರ ನಿತ್ಯ ಪ್ರಾರ್ಥನೆ ಯಲ್ಲಿ ಸೇರಿರುವ ರಹಸ್ಯವಾದರೂ ಯಾವುದು? ಮರು ಸಂಶೋಧನೆಯಿಂದ ಸಿದ್ಧಗಂಗೆ ಮಠದ ಘನತೆ ಮತ್ತಷ್ಟು ಹೆಚ್ಚುತ್ತದೆ.

ಶ್ರೀ ಅವರ ಬದುಕು ಮತ್ತು ದೈನಂದಿನ ಆಚರಣೆ ಗಳಿಂದ. ಅವರದ್ದು ಜ್ಞಾನ, ಭಕ್ತಿ, ಧ್ಯಾನ ಮತ್ತು ಕ್ರಿಯಾ ಚರಣೆ. ಕ್ರಿಯೆ ಧಾರ್ಮಿಕವೂ ಹೌದು, ಲೌಕಿಕವೂ ಹೌದು. ಅದನ್ನೇ ಕಾಯಕ ಎನ್ನುವುದು. ಶ್ರೀಯವರ ಧ್ಯಾನವೇ ಯೋಗ. ಅವರಿಗೆ ಬಸವಣ್ಣನ 'ಇದೆ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ', ಅಲ್ಲಮನ 'ಒಡವೆ ಎಂಬುದು ಜ್ಞಾನರತ್ನ' ಎಂಬ ಮಾತುಗಳು ಅತ್ಯಂತ ಪ್ರಿಯವಾದವು. ಶ್ರೀಯವರಿಗೆ ಕೈವಲ್ಯ ಪದ್ಧತಿ ಹಾಡುಗಳು ಪಂಚಪ್ರಾಣ, ನಿಜಗುಣರ 'ಜ್ಯೋತಿ ಬೆಳಗುತಿದೆ', ಷಡಕ್ಷರಿಯ 'ಸಕಲಕೆಲ್ಲಕೆ ನೀನೆ ಅಕಳಂಕ ಗುರುವೆ' ಎಂಬ ಹಾಡುಗಳನ್ನು ಸಭೆಗಳಲ್ಲಿ ಎದೆ ತುಂಬಿ ಹಾಡಿ, ಸಭಿಕರನ್ನು ಮಂತ್ರಮುಗ್ಧರನ್ನಾಗಿ ಸುತ್ತಿದ್ದರು. ಇವೆಲ್ಲಕ್ಕಿಂತ ಅವರ ಮನಸ್ಸಿನಲ್ಲಿ ಅಚ್ಚೊತ್ತಿದಂತಿದ್ದುದು. ಶಿವನ ಪರೀಕ್ಷೆಯಲ್ಲಿ ಗೆದ್ದ ಮೇದರ ಕೇತಯ್ಯನ' ಭಂಗವಾಗಿದೆ ಬಿದುರು, ಬಂಗಾರದ ಹುಳುಹತ್ತಿ' ಎನ್ನುವ ಕಾಯಕಶುದ್ಧಿಯ ಮಾತು. ಇಂಥ ಉದಾತ್ತವಾದ, ಶ್ರೀಯವರ ಚಿಂತನೆಗಳು, ಸುತ್ತಮುತ್ತಿನ ಎಷ್ಟು ಜನರಿಗೆ ಪ್ರೇರಣೆಯಾಯಿತು? ಸಿದ್ಧಗಂಗೆಯ ಕೀರ್ತಿ ಕೇವಲ ಪ್ರಚಾರದ ಮೇಲೆ ನಿಂತಿಲ್ಲ. ಅದಕ್ಕೆ ವಿಚಾರದ ಗಟ್ಟಿ ನೆಲೆಯಿದೆ. ಇಂಥ ಸನ್ನಡತೆಯ ಮಠದ ದುರುಪಯೋಗ ವ್ಯಕ್ತಿ. ಕುಟುಂಬ ಸಂಸ್ಥೆ ಯಾರಿಂದಲೂ ಸಾಧ್ಯವಿಲ್ಲ. ಅದರ ಸಂಪ್ರದಾಯ ವನ್ನು ಅದು ರಕ್ಷಿಸಿಕೊಳ್ಳುತ್ತದೆ.





ಶ್ರೀಯವರ ಬದುಕು ಎಂದೂ ವಾಸ್ತವಿಕ ನೆಲೆಗಟ್ಟಿನ ಮೇಲೆ ನಿಂತದ್ದು, ಹಣ್ಣು ಹಣ್ಣಾಗಿರುವ ಇಳಿವಯಸ್ಸಿನಲ್ಲಿಯೂ ಅವರದ್ದು ಅವಿಶ್ರಾಂತ ದುಡಿಮೆ. ಶ್ರೀಯವರು ಕೇವಲ ವ್ಯಕ್ತಿಯಲ್ಲ, ಅವರು ಒಂದು ಶಕ್ತಿ, ಸಮೂಹ ಶಕ್ತಿ, ಸಮುದಾಯ ಶಕ್ತಿ. ಮಠದ ಬೆಳೆದಿರುವ ಸಂಖ್ಯೆಗೆ ಅನುಗುಣ ವಾಗಿ, ವಿಶ್ವಾಸಿ ನಿಷ್ಠಾವಂತ ಸಮಾಜ ಸೇವಕ ಪಡೆ, ಕಂಡಾಗ ಮಾತ್ರ, ಶ್ರೀಯವರಿಗೆ ನೆಮ್ಮದಿ ಮತ್ತು ವಿಶ್ರಾಂತಿ. ಶ್ರೀಯವರ ದಿವ್ಯತೆಯ ಸಾಧನೆ, ಅವರು ಮೆರೆದ ಮಾನವೀಯತೆ ಯಿಂದ ಪ್ರಾಪ್ತಿ. ಅವರ ಬದುಕು ಒಂದು ಗಂಧದ ಕೊರಡು, ಅದು ಕಂಪು ಬೀರಿದ್ದು, ತೇದದ್ದು ಪರರಿಗಾಗಿ, ಸಮಾಜಕ್ಕಾಗಿ, ಅವರ ಬದುಕು 'ಕಪ್ಪುರದ ಗಿರಿ ಉರಿದು ನಿಲ್ಲದಂತಾಗಲಿ' ಎಂದು ಪ್ರಾರ್ಥಿಸುತ್ತೇನೆ.

'ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿಯನ್ನು ನನಗೆ ಈ ಸಭೆಯಲ್ಲಿ ನೀಡಿರುವುದಕ್ಕಾಗಿ ಶ್ರೀಯವರಿಗೆ ಮತ್ತು ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘಕ್ಕೆ ನನ್ನ ಕೃತಜ್ಞತೆಗಳು. ❖

> ಶ್ರೇಷ್ಠಜೀವಿಯಾದ ಮಾನವನು ತನಗೆ ದೊರೆತಿರುವ ಅಲ್ಪಕಾಲದಲ್ಲಿಯೇ ತನ್ನ ಪವಿತ್ರ ಜೀವನವನ್ನು ಸಾರ್ಥಕ ಗೊಳಿಸಲು ಯತ್ನಿಸಬೇಕು. ಮಾನವನ ಉನ್ನತಿಯು ಅವನು ಮಾಡುವ ಕಾರ್ಯಗಳನ್ನು ಅವಲಂಬಿಸಿದೆ. ಆ ಕಾರ್ಯ ಗಳು ಸತ್‌ಕಾರ್ಯಗಳಾದರೆ, ವ್ಯಕ್ತಿಗೂ, ದೇಶಕ್ಕೂ ಕೂಡಿಯೇ ಹಿತವಾಗುತ್ತದೆ. ಒಳ್ಳೆಯ ಕಾರ್ಯಗಳಿಂದ ಜೀವನವೂ ಪವಿತ್ರವೆನಿಸುತ್ತದೆ.
>
> -ಶ್ರೀವಾಣಿ

## ಶ್ರೀ ಉದ್ದಾನಶಿವಯೋಗಿ ಸ್ತುತಿ

ಶ್ರೀ ಮದ್ಭಾಸುರ ಭಸ್ಮರೇಖ ಧವಲಂ ಸದ್ಯೋಗ ಸಂಸಿದ್ಧನಂ।
ಶ್ರೀ ಮಚ್ಚಿದ್ಧರನಂತ ನಿತ್ಯಸುಖದಂ ಸುಜ್ಞಾನ ಸಂವರ್ಧನಂ॥
ಶ್ರೀ ಮತ್ಪುಣ್ಯವರ ಪ್ರದಾತ್ಮಕ ಶಿವಂ ಶ್ರೀ ಸಿದ್ಧಗಂಗಾಪ್ರಿಯಂ।
ಶ್ರೀ ಮತ್ಪ್ರೇಮದಿ ಭಕ್ತರಂ ಸಲಹುಗೆ ಶ್ರೀ ಸಿದ್ಧಲಿಂಗೇಶ್ವರಂ।

ಶ್ರೀ ಮತ್ಸದ್ಗುಣ ಮೂರ್ತಿ ಮದ್ಗುರುವರಂ ನಿತ್ಯಾನ್ನದಾನ ಪ್ರಿಯಂ ।
ಶ್ರೀ ಮತ್ಸಂಸ್ಕೃತ ವಿದ್ಯಾವರ್ಧನ ವಿಭುಂ ಸದ್ಬೋಧ ಚಕ್ರಾಧಿಪಂ ।
ಶ್ರೀ ಮನ್ಮಂಗಳ ಪುಣ್ಯದಿಂ ಮೊಳಗುವಾ ಶ್ರೀ ಸಿದ್ಧಗಂಗಾಧಿಪಂ
ಶ್ರೀ ಮತ್ಸಾಮಿಯು ಕಾಯ್ವುರೆಮ್ಮವನಿಶಂ
ಉದ್ದಾನಯೋಗೀಶ್ವರಂ ॥

ಧರೆಯೋಳ್ ಧಾರ್ಮಿಕ ತತ್ವಮಂ ಪ್ರಕಟಿಸಲ್ ಪುಟ್ಟಿರ್ಪ ಪಂಚಾನನಂ ।
ನರನಜ್ಞಾನದ ಕುತ್ತಮಂ ಬಿಡದಿಡಲ್ ಬಂದಿರ್ಪಧನ್ವಂತರೀ
ತಿರೆಯೋಳ್ ಬೇಳ್ಪರಭೀಷ್ಟ ಮನ್ನೊಡರಿಸಲ್ ನಿಂದಿರ್ಪ ಕಲ್ಪದ್ರುಮಂ ।
ಗುರುದೇವಂ ಶಿವಪುತ್ರನೀಗೆ ನಲವಿಂದೆಮ್ಮಿಷ್ಟ ಸಂಸಿದ್ಧಿಯಂ

ಸಿದ್ಧನೆ ಯತಿವರ ಪೂಜ್ಯನೆ
ಬುದ್ಧನೆ ಶಿವಯೋಗಿ ಸಿದ್ಧಗುಣಾಧ್ಯಕ್ಷಾ
ಶುದ್ಧಾತ್ಮನೆ ಜಿತ ನುದನನೆ
ಉದ್ಧರಿಸೆನ್ನಂ ಕರುಣಾದೊಳುದ್ದಾನೇಶ

ದುರಿತಾರಣ್ಯವ ಸುಡುವಡೆ
ಭರದಿಂ ದಾಂಟುವಡೆ ಘೋರಭವಸಾಗರಮಂ
ಪರತರ ಸುಖವಂ ಪಡೆವೊಡೆ
ಗುರುಭಕ್ತಿಯೆ ಮೂಲ ಗುರುಕುಲ ತಿಲಕ.

-ಎಂ. ನಂಜುಂಡಯ್ಯ,
ಕನ್ನಡ ಪಂಡಿತ್, ಅಂಬಲಗೆರೆ.

## ಪಿಂಡ ತಾಂತ್ರಿಕ ತಜ್ಞ ಬಸವಣ್ಣನವರು

–ಪೂಜ್ಯ ವಿ. ಸಿದ್ಧರಾಮಣ್ಣ ಶರಣರು *

ಅಂಡಜ, ಸ್ವೇದಜ, ಉದ್ವಿಜ, ಜರಾಯುಜ ಎಂಬ ಎಂಭತ್ನಾಲ್ಕು ಲಕ್ಷ ಜೀವಿಗಳಲ್ಲಿ ಮಾನವ ಜೀವಿ ಶ್ರೇಷ್ಠ ಸ್ಥಾನವನ್ನು ಗುರುತಿಸಿಕೊಂಡಿದ್ದಾನೆ.

ಈ ಮಾನವನು ಶ್ರೇಷ್ಠನಾಗುವುದು ಏತರಿಂದ? ಎಂದು ಪ್ರಶ್ನಿಸಿಕೊಳ್ಳಬೇಕು. ಏಕೆಂದರೆ, ಆಶೆ, ಆಮಿಷ, ರೋಷ, ಹರುಷ, ವಿಷಯಾದಿಗಳೆಲ್ಲಾ ಒಂದೆ. ಇದು ಪಿಂಡ ತಾಂತ್ರಿಕ ತಜ್ಞರಾದ, ಪೂಜ್ಯ ಲೋಕಗುರು ಬಸವಣ್ಣನವರಿಂದ ಸಂಶೋಧಿಸಲ್ಪಟ್ಟ ಸತ್ಯಾಂಶವಾಗಿದೆ.

ಹೀಗಿರುವಾಗ, ಮಾನವನು ಶ್ರೇಷ್ಠನೆನೆಸಿಕೊಳ್ಳುವುದು ಯಾವಾಗ? ಏತರಿಂದ? ಅವನು ತನ್ನ ಮೂಲ ಸ್ವರೂಪದ ನೆಲೆಯನ್ನು ಕಂಡುಕೊಂಡು, ಮಹಾಲಿಂಗಾನಂದ ಸುಖವನ್ನು ಅನುಭವಿಸಿದಾಗ ಶ್ರೇಷ್ಠನೆನಿಸಿಕೊಳ್ಳಬಲ್ಲ. ಏಕೆಂದರೆ, ಸೃಷ್ಟಿ ನಿರ್ಮಾಣವಾಗಿರುವುದೇ ಮಹಾಲಿಂಗದಿಂದ. ಇದನ್ನು ಮಹಾಗುರು ಬಸವಣ್ಣನವರು ಆರು ಹಂತಗಳಲ್ಲಿ ಗುರ್ತಿಸಿದ್ದಾರೆ. ಅಖಂಡ ಆತ್ಮೋದಯದ ಆರು ಹಂತಗಳಿವು–

***ಆತ್ಮತತ್ವದ ಐಕ್ಯಸ್ಥಲ ಮಹಾಲಿಂಗ ಓಂಕಾರ ಪ್ರಣವ***
***ಆಕಾಶತತ್ವದ ಶರಣಸ್ಥಲ ಪ್ರಸಾದಲಿಂಗ, ಯಕಾರ ಪ್ರಣವ.***
***ವಾಯುತತ್ವದ ಪ್ರಾಣಲಿಂಗಿಸ್ಥಲ, ಜಂಗಮಲಿಂಗ, ವಕಾರ ಪ್ರಣವ,***
***ಅಗ್ನಿತತ್ವದ ಪ್ರಸಾದಿಸ್ಥಲ, ಶಿವಲಿಂಗ, ಶಿಕಾರಪ್ರಣವ. ಅಪ್ಪುತತ್ತ್ವದ***
***ಮಾಹೇಶ್ವರಸ್ಥಲ ಗುರುಲಿಂಗ. ಮಕಾರ ಪ್ರಣವ ಪೃಥ್ವಿತತ್ವದ ಭಕ್ತಸ್ಥಲ***
***ಆಚಾರಲಿಂಗ, ನಕಾರ ಪ್ರಣವ.***

ಈ ಸೂತ್ರವಿಡಿದೇ ಶರಣನ ಉದಯ, ಈ ಪೃಥ್ವಿಯೇ ಮಹಾಲಿಂಗದ ಲಿಂಗಲೀಲಾ ರಂಗಭೂಮಿ. ಇದನ್ನೇ ಗುರುದೇವ ಬಸವಣ್ಣನವರು –

'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ ಎಂದಿದ್ದಾರೆ. ಮರ್ತ್ಯಲೋಕದ ಮಹಾಮನೆ, ಅಂದರೆ ಮಹಾಲಿಂಗದ ನೆಲೆವನೆ ಎಂದೂ ಗುರ್ತಿಸಿದ್ದಾರೆ.ಇವೇ ಷಟ್‌ಸ್ಥಲಗಳು

ಇಲ್ಲಿ ಮಾನವನು, ತಾನು ಮಹಾಲಿಂಗದೊಡಲೊಳಗಿಂದ ಉದಿಸಿ ಬಂದಿರುವೆ. ಆದ್ದರಿಂದ ನಾನು ಮಹಾಲಿಂಗ ಸ್ವರೂಪನೇ ಇದ್ದೇನೆ ಎಂಬ ತನ್ನ ಮೂಲ ಪ್ರಜ್ಞೆವಿಡಿದು ಸತ್ಯಶುದ್ಧ ಕಾಯಕ, ನಿತ್ಯಲಿಂಗಾರ್ಚನೆ ಭಕ್ತಿದಾಸೋಹ ಮಾಡಬೇಕು. ಇದು ಲಿಂಗಲೀಲೆ ಸ್ವರೂಪಾನಂದದ ನಿಬ್ಬೆರಗು.

ಆದರೆ, ಈ ಆನಂದ, ಈ ನಿಬ್ಬೆರಗು ಪಶುಪ್ರಾಣಿಗಳಿಗೆ ಸಾಧ್ಯವಿಲ್ಲ. ಅವು ಪ್ರಕೃತಿದತ್ತ ಪ್ರಾಣಿಗಳು, ಯಾಂತ್ರಿಕ ಜೀವನ, ಉಂಡು ತಿಂದು ಮಲಗಿ, ಮಕ್ಕಳ ಹಡೆದು ಕೆಲದಿನ ಇದ್ದು ಕೊನೆ ಉಸಿರು ಎಳೆಯುವುದು. ಮಾನವನು ಹೀಗೆಯೇ ಆದರೆ ಅವನಿಗೆ ಹೆಚ್ಚಿನ ಬೆಲೆ ಏನೂ. ಇಲ್ಲವಲ್ಲವೇ?

ಮಾನವನು ಬುದ್ಧಿಜೀವಿ, ಪ್ರಯತ್ನಶೀಲ, ವಿಜ್ಞಾನಿ. ಅಂತೆಯೇ ಕಾಲಕಾಲಕ್ಕೆ ವಿಕಾಸ ಹೊಂದುತ್ತ ತನ್ನಲ್ಲಿದ್ದ ಅಪಾರ ಜ್ಞಾನ ಭಂಡಾರದ ಪ್ರಯೋಗದಿಂದ, ವಿಷಯ ವಸ್ತುಗಳನ್ನು ನಿರ್ಮಿಸಿಕೊಳ್ಳುತ್ತಾ ಅದರ ಸುಖವನ್ನು ಭೋಗಿಸುತ್ತಾ ಮುನ್ನಡೆದಿದ್ದಾನೆ. ಆದರೆ ಶಾಂತಿ, ಎಂಬುದು ಇಲ್ಲವಾಗಿ, ದ್ವೇಷ, ಅಸೂಯೆ, ಮದ ಮತ್ಸರಾದಿಗಳಿಂದ ತುಂಬಿದ ಒಂದು ಭ್ರಾಂತಿಯ ಬೊಂಬೆಯಾಗಿದ್ದಾನೆ. ಏಕೆಂದರೆ, ತನ್ನ ಮೂಲ ಸ್ವರೂಪದ ಪ್ರಜ್ಞೆಯನ್ನೇ ಕಳೆದುಕೊಂಡಿದ್ದಾನೆ. ಮರೆತಿದ್ದಾನೆ. ವಿಷಯ ವಾಸನೆಯ ಅಮಲೇರಿದೆ. 'ವಿಜ್ಞಾನಿ, ಎನಿಸಿಕೊಂಡರೂ ಅಜ್ಞಾನಿಯಾಗಿದ್ದಾನೆ. ಇದನ್ನೇ ಪೂಜ್ಯ ಗುರು ಬಸವಣ್ಣನವರು–

***'ಏನನಾದಡೆಯೂ ಸಾಧಿಸಬಹುದು***
***ಮತ್ತೇನನಾದಡೆಯೂ ಸಾಧಿಸಬಹುದು***
***ತಾನಾರೆಂಬುದ ಸಾಧಿಸಬಾರದು***
***ಕೂಡಲಸಂಗಮದೇವನ ಕರುಣ ಉಳ್ಳವಂಗಲ್ಲದೆ***

ಈ ವಚನದಲ್ಲಿ ವಿಜ್ಞಾನದ ಚಮತ್ಕೃತಿಯನ್ನು ಬಹಳ ಸುಂದರ ವಾಗಿ ಬಿಂಬಿಸಿದ್ದಾರೆ ಬಸವಣ್ಣನವರು. ಅಷ್ಟೇ ಅಲ್ಲದೆ ಅಂತಿಮ ನಿರ್ಣಯವನ್ನು ಕೊಟ್ಟಿದ್ದಾರೆ.

* ಸಂಚಾಲಕರು, ಅನುಭವ ಮಂಟಪ, ಬಸವಕಲ್ಯಾಣ, ಬೀದರ್ ಜಿಲ್ಲೆ.





## ಹಲವು ಸಂಕ್ರಾಂತಿ

–ಡಾ|| ಅರುಣ್ ಜೋಳದಕೂಡ್ಲಿಗಿ *

ಸಂಕ್ರಾಂತಿಯು ರೈತರೊಂದಿಗೆ, ಬೆಳೆದ ಬೆಳೆಯೊಂದಿಗೆ, ತಮಗೆ ಹೆಗಲು ಕೊಡುವ ಎತ್ತು, ದನ ಕರುಗಳೊಂದಿಗೆ, ಭೂಮಿಯೊಂದಿಗೆ, ನದಿ ಹೊಳೆಯೊಂದಿಗೆ ಬೆಸೆದುಕೊಂಡಿದೆ. ಈ ಎಲ್ಲವುಗಳೂ ಸೂರ್ಯ ಪಥ ಬದಲಿಸಿದಂತೆ, ತಾವೂ ಪಥ ಬದಲಿಸುತ್ತಿವೆ. ಈ ಬದಲಾಗುವಿಕೆ ಸಂಭ್ರಮಿಸುವಂತಿಲ್ಲದೆ, ನೋವ ಕೊಡುವಂತಿದೆ. ಹಾಗಾಗಿ ಸಂಕ್ರಾಂತಿಯ ನೆನಪೆಂದರೆ, ಈಗದು ರೈತಪರಿವಾರದ ದುಃಸ್ಥಿತಿಯ ನೆನಪೂ ಕೂಡ.

ರೈತರ ಇಂದಿನ ಸ್ಥಿತಿ ಸಂಭ್ರಮಿಸುವಂತಿಲ್ಲ. ತಾನು ಉತ್ತಿ ಬಿತ್ತುವ ನೆಲ ತನ್ನ ಕೈಹಿಡಿದೀತೆಂಬ ಭರವಸೆ ಕರಗುತ್ತಿದೆ. ನೆಲ ತನ್ನ ಕೈಬಿಡುವ ಆತಂಕ ಕೆಲವರದು. ತನ್ನ ನೆಲವ ಕದ್ದೊಯ್ಯುತ್ತಿರುವ ಹಗಲುಗಳ್ಳರ ಕನಸಾಗಿ ಬೆಚ್ಚುವ ಸ್ಥಿತಿ ಹಲವರದ್ದು. ಬಿತ್ತಿದ ಬೆಳೆ ಬದುಕ ನೀಗಿಸಲು ಸೋಲುತ್ತಿರುವುದೂ, ಸದ್ಯದ ಬಹುಪಾಲು ರೈತರ ಅನುಭವ. ಕೃಷಿ ಸಮೃದ್ಧಿಯೇ ಕನಸಾದಾಗ ಅದರ ಸಂಕೇತದ ಹಬ್ಬ ಯಾವ ತೆರನದ್ದು ಎನ್ನುವ ಪ್ರಶ್ನೆ ಎದುರಾಗುತ್ತದೆ. ಸದ್ಯದ ಸಂಕ್ರಮಣ ಯಾವ ಸಮೃದ್ಧಿಯ ಸಂಕೇತ? ಯಾರ ಸಮೃದ್ಧಿಯ ಸಂಕೇತ ಎನ್ನುವ ಪ್ರಶ್ನೆಗಳೂ ಕಾಡದಿರವು.

### ನಿಸರ್ಗಕ್ಕೆ ಸ್ಪಂದನ :

ನಿಸರ್ಗದಲ್ಲಾಗುವ ಬದಲಾವಣೆಗೆ ಜನ ಸಮುದಾಯ ತೋರುವ ಸ್ಪಂದನ ರೂಪದ ಹಲವು ಆಚರಣೆಗಳಲ್ಲಿ ಸಂಕ್ರಾಂತಿಯೂ ಒಂದು. ಸೂರ್ಯ ಒಂದು ರಾಶಿಯೊಳಗಿನ ಹೆಜ್ಜೆಯನ್ನು ಮತ್ತೊಂದರಲ್ಲಿ ಇಡುವುದರ ಸಾಂಕೇತಿಕ ಸಂಭ್ರಮವಿದು. ಹನ್ನೆರಡು ರಾಶಿ, ಮಾಸಗಳ ಕಾರಣ ವರ್ಷಕ್ಕೆ ಹನ್ನೆರಡು ಸಂಕ್ರಾಂತಿಗಳೇ ಸಂಭವಿಸುತ್ತವೆ. ಇವುಗಳಲ್ಲಿ ಎರಡನ್ನು ಮಾತ್ರ ಮುಖ್ಯವೆಂದು ಭಾವಿಸಲಾಗುತ್ತದೆ. ಸೂರ್ಯ ಮಿಥುನದಿಂದ ಕರ್ಕಾಟಕಕ್ಕೆ ಪ್ರವೇಶಿಸುವುದು ಒಂದಾದರೆ, ಧನುವಿನಿಂದ ಮಕರಕ್ಕೆ ಸಂಕ್ರಮಿಸುವುದು ಮತ್ತೊಂದು. ಇವೆರಡೂ ಸೂರ್ಯನ ದಾರಿಯ ಮಾರ್ಗಸೂಚಿಗಳು. ಒಂದು ದಕ್ಷಿಣಾಯನ. ಮತ್ತೊಂದು ಉತ್ತರಾಯನ. ಈ ಬಗೆಗಿನ ಪುರಾಣ ಐತಿಹ್ಯಗಳು ಹಲ ಬಗೆಯ ಕಥನಗಳನ್ನು ಹುಟ್ಟಿಸಿವೆ. ಇದರಲ್ಲಿ ತಿಲಾಸುರನ ವಧೆಯ ಕಥೆ ಜನಪ್ರಿಯ.

ಬ್ರಹ್ಮನಿಂದ ವರ ಪಡೆದ ತಿಲಾಸುರನೆಂಬ ರಾಕ್ಷಸ ಲೋಕಪೀಡಕನಾಗುತ್ತಾನೆ. ಆಗ 'ಮಕರ', 'ಕರ್ಕ' ಎಂಬ ಮಹಿಳೆಯರ ಸಹಾಯ ಪಡೆದು ಸೂರ್ಯ ಆತನನ್ನು ಸಂಹರಿಸುತ್ತಾನೆ. ಮಕರ ತಿಲಾಸುರನ ಹೊಟ್ಟೆ ಬಗೆದಾಗ ಭೂಮಿಗೆ ಎಳ್ಳಿನ ಪ್ರವೇಶವಾಗುತ್ತದೆ. ಮಕರನ ಸಾಹಸ ಮೆಚ್ಚಿ ಸೂರ್ಯ–'ನಿನ್ನನ್ನು, ನಿನ್ನಿಂದ ಭೂಮಿಗೆ ಬಂದ ಎಳ್ಳನ್ನು ಪೂಜಿಸಿದವರಿಗೆ ಒಳಿತಾಗಲಿ' ಎಂದು ಹರಸಿದನಂತೆ. ಹೀಗೆ ಎಳ್ಳು ಬೀರುವ ಆಚರಣೆ ಬಂದದ್ದಾಗಿಯೂ, 'ಮಕರ ಸಂಕ್ರಮಣ' ಎಂಬ ಹೆಸರು ಜನರಲ್ಲಿ ಉಳಿದದ್ದಾಗಿಯೂ ಈ ಕಥೆ ಹೇಳುತ್ತದೆ.

ರಾತ್ರಿಯೇ ಹೆಚ್ಚಾಗಿ, ಹಗಲು ಕಡಿಮೆ ಇರುವ ಚಳಿಗಾಲಕ್ಕಿದು ಇಳಿಗಾಲ. ಹಗಲು ಹಿಗ್ಗಿಕೊಂಡು, ರಾತ್ರಿ ಕುಗ್ಗಿಕೊಳ್ಳುವ, ಶೀತವು ಶಾಖಕ್ಕೆ ಅಂಜಿ ಹಿಂದೆ ಸರಿಯುವ ಕಾಲಮಾನವಿದು. ಹೀಗಾಗಿಯೇ ಜನಪದರು 'ಸಂಕ್ರಾಂತಿಗೆ ಚಳಿ ಕಡಿಮೆಯಾಗಿ, ಶಿವರಾತ್ರಿಗೆ ಶಿವ ಶಿವ ಅಂತ ಮಾಯವಾಯ್ತೆ' ಎಂದದ್ದಿದೆ. ಹಾಗಾಗಿ ಚಳಿಯಲ್ಲಿ ಮುದುಡಿಕೊಂಡ ದೇಹ ಮನಸ್ಸುಗಳನ್ನು ಬಿಸಿಲಿಗೆ ಬೆಚ್ಚಗಾಗಿಸುವ, ಹೈದರಾಬಾದ್ ಕರ್ನಾಟಕದವರಿಗೆ ಬರಲಿರುವ ಬಿಸಿಲಿನ ತಾಪವ ನೆನಪಿಸಿ ಬೆವರಿಳಿಸುವ ಹಬ್ಬ ಈ ಸಂಕ್ರಮಣ.

ಹದವಾಗಿ ಹುರಿದ ಎಳ್ಳು, ಹುರಿಗಡಲೆ, ಒಣಕೊಬ್ಬರಿ ತುಂಡು, ಬೆಲ್ಲದಚ್ಚು ಮುಂತಾದುವುಗಳ ಮಿಶ್ರಣವನ್ನು ತಯಾರಿಸುವುದೂ, ಅದನ್ನು ಎಳ್ಳುಬೀರಿ 'ಎಳ್ಳು ಬೆಲ್ಲ ಕೊಳ್ಳಿ, ಒಳ್ಳೊಳ್ಳೆ ಮಾತನಾಡಿ' ಎನ್ನುವುದು ಸಂಕ್ರಮಣದ

* ಖ್ಯಾತ ಅಂಕಣಕಾರರು, ಬೆಂಗಳೂರು.

ಸಂಭ್ರಮವನ್ನು ಹಂಚಿಕೊಳ್ಳುವ ವಿಧಾನ. ಇದು ಎಲ್ಲಾ ಕಡೆಗೂ ಸಾಮಾನ್ಯವಾಗಿದೆ. ಇದನ್ನೇ ವೈದ್ಯರು–'ಚಳಿಗಾಲ ದಲ್ಲಿ ದೇಹದಲ್ಲಿರುವ ಎಣ್ಣೆ ಅಂಶ(ಫ್ಯಾಟ್) ದೇಹವನ್ನು ಬಿಸಿಯಾಗಿಡಲು ಹೆಚ್ಚು ಖರ್ಚಾಗಿ ಕಡಿಮೆಯಾಗುತ್ತದೆ. ಹಾಗಾಗಿ ಎಣ್ಣೆ ಅಂಶವಿರುವ ಎಳ್ಳು, ಒಣಕೊಬ್ಬರಿ, ನೆಲಗಡಲೆ ಜತೆ ಬೆಲ್ಲ ಸಕ್ಕರೆಯನ್ನು ತಿನ್ನುವುದು ಒಳ್ಳೆಯದು' ಎನ್ನುವ ಅಭಿಪ್ರಾಯ ತಾಳುತ್ತಾರೆ.

ಸಂಕ್ರಾಂತಿಯ ಆಚರಣೆ ಕರ್ನಾಟಕದಾದ್ಯಂತ ಒಂದೇ ತೆರನಾಗಿಲ್ಲ. ಸಂಕ್ರಾಂತಿ ಕರ್ನಾಟಕದ ಹಲವು ಕಡೆ ತನ್ನದೇ ಪ್ರಾದೇಶಿಕ ಪರಕುಗಳನ್ನು ಈಗಲೂ ಉಳಿಸಿಕೊಂಡಿದೆ. ಕರ್ನಾಟಕದ ಕೆಲ ಭಾಗಗಳಲ್ಲಿ ಸಂಕ್ರಾಂತಿಯ ಹೆಸರನ್ನೂ ಕೇಳದ ಹಳ್ಳಿಗಳಿವೆ. ಅಲ್ಲೆಲ್ಲಾ ರೈತ, ಹೊಲ, ಸುಗ್ಗಿಯನ್ನು ನೆನಪಿಸುವ ಬೇರೆ ಬೇರೆ ಆಚರಣೆಗಳಿವೆ. ಜಾನುವಾರುಗಳನ್ನು ಗೌರವಿಸುವ ಬಸವ ಜಯಂತಿಯಂತಹ ಹಬ್ಬಗಳೂ ಇವೆ. ಹಾಗಾಗಿ ಇಲ್ಲಿ ಒಂದು ಸಂಕ್ರಾಂತಿಗಿಂತ ಹಲವು ಸಂಕ್ರಾಂತಿಗಳಿವೆ.

**ಜಾನುವಾರು ಸ್ನೇಹಿ ಹಬ್ಬ :**

ಸಂಕ್ರಾಂತಿಯಂದು ಹೋರಿಗಳನ್ನು ಕಿಚ್ಚು ಹಾಯಿಸುವ ಸಂಪ್ರದಾಯ ಹೆಚ್ಚಿದೆ. ತುಮಕೂರು, ಮಂಡ್ಯ, ಮೈಸೂರು, ಚಾಮರಾಜನಗರ ಭಾಗದಲ್ಲಿ ಇದರ ಸಂಭ್ರಮ ಹೆಚ್ಚು. ಎತ್ತು, ಆಕಳಗಳನ್ನು ಸಿಂಗರಿಸುವ ಪರಿ ನೋಡಲು ಮೋಹಕವಾಗಿರುತ್ತದೆ. ಎತ್ತುಗಳೂ ಚಳಿಯಿಂದ ಬಿಡಿಸಿ ಕೊಂಡು ಕಾವೇರಲಿ. ಎತ್ತಿನ ದೇಹದಲ್ಲಿನ ಕ್ರಿಮಿಗಳು ನಾಶ ವಾಗಲಿ, ಒಳ್ಳೆಯ ರಾಸುಗಳಿಗೆ ರಾವು ಬಡಿಯದಿರಲಿ ಎನ್ನುವ ಹಿನ್ನಲೆಯೂ ಈ ಆಚರಣೆಗೆ ಇದ್ದಂತಿದೆ. ಹೀಗೆ ಕಿಚ್ಚಾಯಿಸುವ ಸಂಪ್ರದಾಯಗಳೂ ಪ್ರಾದೇಶಿಕವಾಗಿ ಭಿನ್ನ ವಾಗಿವೆ. ಚಿಕ್ಕಬಳ್ಳಾಪುರ ಭಾಗದಲ್ಲಿ ಮನೆಗಾಗಿ ದುಡಿದು ತೀರಿದ ಎತ್ತುಗಳ ಸಮಾಧಿಗೆ ಪೂಜೆ ಮಾಡುವ ಆಚರಣೆ ಯಿದೆ. ಇಲ್ಲಿ ಎತ್ತುಗಳನ್ನು ದೇವರೆಂದು ಭಾವಿಸುತ್ತಾರೆ. ಹಬ್ಬಕ್ಕೆ ಮಾಡಿದ ಕಿಚಡಿಯನ್ನೇ ಆ ದಿನ ಎತ್ತುಗಳಿಗೆ ತಿನ್ನಿಸಲಾಗುತ್ತದೆ. ಹಬ್ಬದ ಉಡುಗೆಯನ್ನು ಎತ್ತಿಗೂ ತಿನ್ನಿಸುವ ಮೂಲಕ ಎತ್ತನ್ನು ಮನೆ ಮಕ್ಕಳಂತೆ ನೋಡಿಕೊಳ್ಳುವ ಆಶಯ ವ್ಯಕ್ತವಾಗುತ್ತದೆ.

ಎತ್ತು, ದನ, ಕರು, ಹಸುಗಳಿಗೆ ಕಾಟ ಕೊಡುವ ಪ್ರಾಣಿಗಳನ್ನು ಹಿಡಿದು ಬೆದರಿಸಿ ಓಡಿಸುವ ಆಚರಣೆಗಳಿವೆ. ಇದು ಕಾಡುಪ್ರಾಣಿಗಳು ಜಾನುವಾರುಗಳ ಮೇಲೆ ಕಣ್ಣು ಹಾಕಬಾರದೆಂಬ ಬೆದರಿಕೆ ಹುಟ್ಟಿಸುವ ತೆರನದ್ದು. ಕರ್ನಾಟಕ ದಲ್ಲಿಯೇ ವಿಶಿಷ್ಟವಾದ ಆಚರಣೆಯೊಂದು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಕದಬಳ್ಳಿಯಲ್ಲಿತ್ತು. (ಕದಂಬರ ದೊರೆ ಈ ಊರಿಗೆ ಬಂದದ್ದರ ಕಾರಣ ಕದಂಬಳ್ಳಿ ಎಂಬ ಹೆಸರಿತ್ತು ಎಂದು ಕ.ರಾ.ಕೃ. ಹೇಳುತ್ತಾರೆ) ಈ ಹಳ್ಳಿಯಲ್ಲಿ ಊರಿನವರು ಬೇಟೆಗೆ ಹೋಗಿ ಜೀವಂತ ನರಿಗಳನ್ನು ಹಿಡಿದು ತಂದು, ಅವುಗಳಿಗೆ ಪಟಾಕಿ ಹಚ್ಚಿ ಕಾಡಿಗೆ ಓಡಿಸುತ್ತಿದ್ದರು. ಈಚೆಗೆ ಮೂರ್‍ನಾಲ್ಕು ವರ್ಷದಿಂದ ಪ್ರಾಣಿ ದಯಾ ಸಂಘದವರ ದೂರಿನ ಮೇರೆಗೆ, ಈ ಆಚರಣೆ ಯನ್ನು ಹೈಕೋರ್ಟ್ ನಿಷೇಧಿಸಿದೆ. ಸಂಕ್ರಮಣದಲ್ಲೀಗ ಅಲ್ಲಿ ಪೊಲೀಸರ ಕಾವಲು.

ಸಂಕ್ರಮಣವು ಕರ್ನಾಟಕದ ಆಹಾರ ವೈವಿಧ್ಯಗಳನ್ನು ಅದರೆಲ್ಲಾ ರುಚಿಗಳೊಂದಿಗೆ ಒಟ್ಟಿಗೆ ತರುತ್ತದೆ. ಆ ವರ್ಷ ಬೆಳೆದ ಬೆಳೆಗಳ ವೈವಿಧ್ಯಗಳನ್ನೆಲ್ಲಾ ಬಳಸಿಕೊಳ್ಳುವಷ್ಟು ವಿಭಿನ್ನ ವಾದ ಅಡುಗೆ ಮಾಡಲಾಗುತ್ತದೆ. ಅವರೆ ಕಾಳಿನ ಕಿಚಡಿ, ಗೆಣಸಿನ ಕಡುಬು, ಗೋಧಿ ಪಾಯಸ, ಉತ್ತರ ಕರ್ನಾಟಕದ ಭಾಗದಲ್ಲಿ ಎಳ್ಳಚ್ಚಿದ ಸಜ್ಜೆ, ಜೋಳದ ರೊಟ್ಟಿ, ಎಣ್ಣೆ ಬದನೆ ಕಾಯಿ, ಕಲಬೆರಕೆ ಸೊಪ್ಪಿನಸಾರು, ಆಗಲಕಾಯಿಪಲ್ಯ, ಉಪ್ಪಿನಕಾಯಿಗಳು, ಮೊಸರು, ಬಾನ, ಗುರೆಳ್ಳು, ಚಟ್ನಿ, ಸೌತೆ, ಮೂಲಂಗಿ, ಗಜ್ಜರಿಯ ಪಚಡಿ, ಮೆಂತೆಸೊಪ್ಪು ಈರುಳ್ಳಿಯ ಕಲಬೆರೆಕೆ, ತರಕಾರಿಗಳನ್ನು ಹಾಕಿ ಮಾಡೂವ ಬರ್ತ, ಕುಂಬಳಕಾಯಿ ಬರ್ತ, ಕೆಂಪು ಮೆಣಸಿನಕಾಯಿ ಚಟ್ನಿ– ಹೀಗೆ ಹೇಳುತ್ತಾ ಹೋದರೆ ಬಾಯಿಯಲ್ಲಿ ನೀರೂರುತ್ತದೆ. ಅಡುಗೆಯನ್ನು ಬುತ್ತಿ ಕಟ್ಟಿ ಕೊಂಡು ಹೊಳೆ ದಡಕ್ಕೋ ನದಿ ತಟಕ್ಕೋ ಹೋಗಿ ಊಟ ಮಾಡುವುದೂ ಸಹ ರುಚಿಯನ್ನು ಹೆಚ್ಚಿಸುತ್ತದೆ.

ಮಾಗಡಿ ತಾಲ್ಲೂಕಿನ ಭಾಗದಲ್ಲಿರುವ ಇಲ್ಲೀಗ ಸಮುದಾಯವು ಸಂಕ್ರಾಂತಿಯನ್ನು ಸಂಕುರಾತಿ ಎನ್ನುತ್ತಾರೆ. ಹಸಿಮಣ್ಣಿನಿಂದ ಸಂಕುರಾತಿ ಅಮ್ಮನ ಕೋಟೆ ಕಟ್ಟಿ, ನಾಲ್ಕು ಆರತಿ ಮಾಡಿ ಆರತಿಗೊಂದರಂತೀ ನಾಲ್ಕು ಕೋಳಿ ಬಲಿ ಕೊಟ್ಟು, ಹಸುವಿನ ಕೆಚ್ಚಲಿನಿಂದ ಉಣ್ಣೆ ತೆಗೆದು ಅನ್ನಕ್ಕೆ





ಹಾಕಿ ಬೇಯಿಸುತ್ತಾರೆ. ಇದನ್ನು 'ಉನ್ನಿ ಅನ್ನ' ಎನ್ನುತ್ತಾರೆ. ಈ ಅನ್ನವನ್ನು ದನದ ಹಿಂಡಿನ ಮೇಲೆ ಚೆಲ್ಲುತ್ತಾರೆ. ತುಮಕೂರು ಮುಂದಾದ ಕಡೆ ಊರ ಹೊರಗೆ ಜೇಡಿ ಮಣ್ಣಿನಿಂದ ಪಿರಮಿಡ್ಡಿನಾಕಾರದಲ್ಲಿ ಗುಡಿ ಕಟ್ಟುತ್ತಾರೆ. ಅದನ್ನು ಕಾಟುಮ್ ರಾಯ್, ಕಾಟ್ ಮೆಟ್ರಾಯ್, ಸಂಕ್ರಾತೆಮ್ಮಾ ಅಂತೆಲ್ಲಾ ಕರೆಯುತ್ತಾರೆ. ಅದನ್ನು ಕಾರೆಗಿಡದ ರೆಂಬೆಗೆ ಸಿಕ್ಕಿಸಿ, ಉಗುನಿ ಹೂ ಮುಡಿಸಿ ಸಿಂಗರಿಸಿ ದನಗಳನ್ನು ಪೂಜಿಸುತ್ತಾರೆ. ಇವೆಲ್ಲಾ ದನಗಾರ ಸಂಸ್ಕೃತಿಯ ನೆನಪು ಗಳನ್ನು ತರುತ್ತವೆ.

ಸೂರ್ಯನು ಎಕ್ಕೆ ಗಿಡದಲ್ಲಿ ನೆಲೆಸಿದ್ದಾನೆಂಬ ನಂಬಿಕೆಯ ಕಾರಣ, ಕೆಲವೆಡೆ ಸಂಕ್ರಮಣಕ್ಕೆ ಎಕ್ಕೆ ಗಿಡದ ಎಲೆಗಳನ್ನು ತಲೆ ಮೇಲಿಟ್ಟುಕೊಂಡು ಸ್ನಾನ ಮಾಡುತ್ತಾರೆ. ಈ ಹಬ್ಬದಲ್ಲಿ ಕೆಲವೆಡೆ ಪ್ರಸಿದ್ಧ ಗೋವಿನ ಹಾಡು ಹೇಳುವ ಪರಂಪರೆ ಇದೆ. ಉತ್ತರ ಭಾರತದಿಂದ ಬಂದ ಈ ಆಚರಣೆ, ಹುಲಿ ಪುಣ್ಯಕೋಟಿ ಹಸುವನ್ನು ತಿನ್ನಲು ನಿರಾಕರಿಸಿ, ಬೆಟ್ಟದ ಮೇಲಿಂದ ಹಾರಿದ ದಿನದ ನೆನಪನ್ನು ತರುತ್ತದೆ. ಎಳ್ಳನ್ನು ಶನಿದೇವರೆಂದು ಭಾವಿಸುವುದೂ ಇದೆ. ದೇವರಿಗೆ ಎಳ್ಳಿನ ದೀಪ ಹಚ್ಚಿದರೆ ಶನಿ ದೂರಾಗಿ ನಿರಾಳವಾಗುವ ನಂಬಿಕೆಯೂ ಕೆಲ ಕಡೆ ಇದೆ.

**ನಂಬಿಕೆಗಳು ನೂರಾರು :**

ಆಂಧ್ರಕ್ಕೆ ಹೊಂದಿಕೊಂಡ ಹಳ್ಳಿಗಳಲ್ಲಿ ರಾಮನು ರಾವಣನನ್ನು ಕೊಂದು ಸೀತೆಯನ್ನು ಪಡೆದ ದಿನವ ಸಂಕ್ರಾಂತಿ ಎನ್ನುವ ನಂಬಿಕೆಯಿದೆ. ಗತಿಸಿದ ಹಿರಿಯರು ಮನೆಗೆ ಮರಳುತ್ತಾರೆಂಬ ವಾಡಿಕೆಯೂ ಇದೆ. ಕೊಡಗಿನ ಮೇರರ ಸಮುದಾಯದಲ್ಲಿ ಅಕ್ಟೋಬರ್ ತಿಂಗಳಲ್ಲಿ ಕಾವೇರಿ ಸಂಕ್ರಮಣ ಮಾಡುವುದೂ ಇದೆ. ಉತ್ತರ ಕರ್ನಾಟಕದಲ್ಲಿ ಇದು ಸಸ್ಯಾಹಾರಿ ಹಬ್ಬವಾದರೆ, ದಕ್ಷಿಣ ಕರ್ನಾಟಕದಲ್ಲಿ ಸಂಕ್ರಮಣ ಮಾಂಸಾಹಾರಿ ಹಬ್ಬ. ಚಾಮರಾಜನಗರ ಮುಂತಾದ ಕಡೆ ಸೇಲಂ ಭಾಗದ ಪ್ರಭಾವವಿದ್ದರೆ, ಬಾಗೇಪಲ್ಲಿ ಶಿರುಗುಪ್ಪ ಮುಂತಾದ ಕಡೆ ಆಂಧ್ರದ ಗಡಿ ಜಿಲ್ಲೆಗಳ ಪ್ರಭಾವ ವಿದೆ. ಚಾಮರಾಜನಗರದಲ್ಲಿ ಮಕ್ಕಳನ್ನು ಕೂರಿಸಿ ಎಳ್ಳೆರೆಯುವ ಆಚರಣೆ ಇದೆ. ಇದರಲ್ಲಿ ಹಸಿ ಉಪ್ಪುಕಡಲೆ, ಎಲಚಿ ಹಣ್ಣು (ಬೋರೆಹಣ್ಣು, ಸಂಕ್ರಾಂತಿ ಗಿಡ ಎಂತಲೂ ಕರೆಯುತ್ತಾರೆ) ನಾಣ್ಯಗಳನ್ನು ಬೆರೆಸಿ ತಲೆ ಮೇಲಿಂದ ಎರೆಯುತ್ತಾರೆ.

ನದಿ ದಡಗಳಿಗೆ, ಹೊಳೆ ದಂಡೆಗಳಿಗೆ ಹಳ್ಳದ ಬದುವು ಗಳಿಗೆ ಈ ಹಬ್ಬ ಜನರನ್ನು ಕರೆತರುತ್ತದೆ. ಎಳ್ಳೆಣ್ಣೆ ಹಚ್ಚಿ ಜನ ನೀರಿಗಿಳಿದು ಸ್ನಾನ ಮಾಡಿ ಸೂರ್ಯ ನಮಸ್ಕಾರ ಮಾಡುತ್ತಾರೆ. ಇದಕ್ಕೆ 'ಸಂಕ್ರಾಂತಿಯ ಕರಿ ಕಳೆಯುವುದು' ಎನ್ನುವ ಹೆಸರಿದೆ. ಹೀಗೆ ಎಳ್ಳೆಣ್ಣೆ ಹಚ್ಚಿ ಸ್ನಾನ ಮಾಡದಿದ್ದರೆ ಸಂಕ್ರಾಮಪ್ಪ ದೇವರು ಬಂದು ಮೈ ಮೂಸಿ ನೋಡಿ ಶಾಪ ಕೊಡುತ್ತಾನೆಂಬ ನಂಬಿಕೆ ಸಿರುಗುಪ್ಪ ಭಾಗದಲ್ಲಿದೆ.

ಉತ್ತರ ಕನ್ನಡದ ಕೆಲವೆಡೆ ಹುಲುಸಾಗಿ ಬೆಳೆ ಬಂದ ಗದ್ದೆಗೆ ದೃಷ್ಟಿಯಾಗದಿರಲೆಂದು ಸಂಕ್ರಮಣದ ಸಂದರ್ಭದಲ್ಲಿ ಬೆಚ್ಚನ್ನು ನಿಲ್ಲಿಸುವುದಿದೆ. ಇದನ್ನು 'ಬೆಚನ್ ಸಂಕ್ರಾಂತಿ' ಎನ್ನುತ್ತಾರೆ. ಕೊಡಗಿನ ಅಂಚಿನ ಭಾಗದ ಆರಂಭಿಸುವ ಅನುಕರಣೆ ಮಾಡುವಿಕೆಯೂ ಇದೆ. ಇದನ್ನವರು 'ಬಿಸು ಸಂಕ್ರಾಂತಿ' ಎನ್ನುತ್ತಾರೆ.

ಸಂಕ್ರಾಂತಿ ಮೂಲತಃ ಸೂರ್ಯನ ಆರಾಧನೆಯ ಹಬ್ಬವಾದರೂ, ಸೂರ್ಯನನ್ನು ಹೆಣ್ಣುದೇವತೆಯೆಂದು ಆರಾಧಿಸುವಿಕೆ ಕೆಲವೆಡೆ ಕಾಣುತ್ತದೆ. ಸಂಕ್ರಾಂತಿಯನ್ನೇ ಸಂಕ್ರಾಂತಮ್ಮನ ಪೂಜೆ, ಸಂಕ್ರಾಂತಮನ್ನ ತಿದ್ದುದು ಅಂತೆಲ್ಲಾ ಮಂಡ್ಯ ತುಮಕೂರು ಭಾಗದಲ್ಲಿ ಕರೆಯುತ್ತಾರೆ. ಗಂಗೆಯಲ್ಲಿ ಮೀಯುವುದೂ ಕೂಡ ಇದರ ಪ್ರಭಾವವೇ ಇರಬೇಕು. ಸಂಕ್ರಾಂತಿಗೆ ಕೆಲವೆಡೆಗಳಲ್ಲಿ ಹೆಣ್ಣುದೇವಿಯ ಜಾತ್ರೆಗಳೂ ನಡೆಯುತ್ತವೆ.

ಈಗ ಗ್ರಾಮೀಣ ಪ್ರದೇಶದಲ್ಲಿ ಸಾಗುವಳಿ ಭೂಮಿಯ ಪ್ರಮಾಣ ಕಡಿಮೆಯಾಗುತ್ತಿದೆ. ತುಂಡು ಹಿಡುವಳಿಗಳು ಹೆಚ್ಚಾಗುತ್ತಿವೆ. ಈ ಕಾರಣಕ್ಕೆ ಎತ್ತುಗಳನ್ನು ಹೊಂದಿವಿಕೆಯ ಪ್ರಮಾಣದಲ್ಲೂ ಇಳಿಮುಖವಾಗುತ್ತಿದೆ. ಬೆಳೆಗಳಲ್ಲಿನ ವೈವಿಧ್ಯತೆಗಳು ನಾಶವಾಗಿ ಏಕಮಾದರಿಯ ವಾಣಿಜ್ಯ ಬೆಳೆಗಳು ಹೆಚ್ಚಿವೆ. ಹಾಗಾಗಿ ಹಸು ಕರು ಎತ್ತುಗಳಿಗೆ ಬೇಕಾಗುವ ಮೇವಿನ ಬೆಳೆಗಳು ಇಲ್ಲವಾಗುತ್ತಿವೆ. ದನ ಕರುಗಳು ತಿರುಗಾಡಿ ಮೇಯುವ ಗೋಮಾಳಗಳು ನಿವೇಶನಗಳಾಗುತ್ತಿವೆ. ಇದೆಲ್ಲ ಬದಲಾವಣೆ ಸಂಕ್ರಾಂತಿ ಹಬ್ಬದ ಆಚರಣೆಯಲ್ಲೂ ಸಹಜವಾಗಿ ಬದಲುಗೊಳಿಸಿದೆ.

ಮನುಷ್ಯರೇ ಬದಲಾಗುವಾಗ ಆಚರಣೆಗಳು ಬದಲಾಗದಿರಲಿ ಸಾಧ್ಯವೇ? ❖

# ಮಹಾದಾಸೋಹಿ ಸಿದ್ಧರಾಮ

-ಯು.ಎಸ್. ಸಂಗನಾಳಮಠ *

*ಬಚ್ಚ ಬರಿ ಬೆಳಗಾಗಿ ನೆರಳ ಮೀರಿದ ಪರಿಯ*
*ನಿಳೆಯೊಳಗೆ ಮೊಳಗಿಸಿದ ಸುಖ-ಮುಖದ ಮಾವುಡಿಗ*
*ನಿಜ-ನಿರಂಜನ ಸಿದ್ಧ ನಿಶೂನ್ಯ ಘನಮಹಿಮ*
*ನೆರಳಾಚೆಯ ಬೆಳಗು ಪರಮಗುರು ಸಿದ್ಧರಾಮ*

ಎಂದು ಡಾ|| ಹೆಚ್. ತಿಪ್ಪೇರುದ್ರಸ್ವಾಮಿಯವರು ಕರ್ಮಯೋಗಿ ಸಿದ್ಧರಾಮರ ಬಗ್ಗೆ ಹೇಳಿದ್ದಾರೆ. ಮಾನವ ಜನಾಂಗಕ್ಕೆ ಲೇಸ ಬಯಸಿದ ಸೊನ್ನಲಿಗೆಯ ಸಿದ್ಧರಾಮ ವಿಶ್ವಕುಟುಂಬಿಗಳು. 'ಸಾಕಾರದೊಳು ನಿಷ್ಠೆ, ಭೂತಕಗಳೊಲನುಕಂಪೆ' ಇವು ಸಿದ್ಧರಾಮನ ಬದುಕಿದ ಸೂತ್ರಗಳು.

ಮಹಾರಾಷ್ಟ್ರದ ಸೊನ್ನಲಿಗೆಯಲ್ಲಿ (ಸೊಲ್ಲಾಪುರ) ಮುದ್ದಗೌಡ-ಸುಗ್ಗವ್ವೆಯರೆಂಬ ವೃದ್ಧ ದಂಪತಿಗಳಿಗೆ ಗುರು ಶ್ರೀ ರೇವಣಸಿದ್ಧರಿಂದ ಅನುಗ್ರಹಿತವಾದ ಮಗುವೇ ಸಿದ್ಧರಾಮ. ದಂಪತಿಗಳು ತಮ್ಮ ಮನೆದೇವರಾದ 'ಧೂಳ ಮಹಾಕಾಳ'ಎಂದು ಕರೆದರೂ, ಸಿದ್ಧರಾಮ ಎಂಬ ಹೆಸರು ರೂಢಿಯಾಯಿತು. ಬಾಲ್ಯದಲ್ಲಿ ದನಕಾಯುವ ಕೆಲಸವನ್ನು ನಿರ್ವಹಿಸುತ್ತಿದ್ದನು. ನವಣೆಯ ಹೊಲದಲ್ಲಿ ನಿಸರ್ಗದ ಸುಂದರ ಪರಿಸರದಲ್ಲಿ ಪರಶಿವನು ಜಂಗಮಮೂರ್ತಿಯಾಗಿ ಬಂದು ಸಿದ್ಧರಾಮನಲ್ಲಿ ದಿವ್ಯಶಕ್ತಿಯ ಶಾಶ್ವತ ಸಾನ್ನಿಧ್ಯವನ್ನು ಹೊಂದಬೇಕೆಂಬ ಹಂಬಲವನ್ನು ಜಾಗ್ರತಗೊಳಿಸುವನು. ಈ ಹಂಬಲದ ಉಲ್ಬಣತೆಯಿಂದ, ಭಕ್ತಾದಿಗಳ ಜೊತೆ ಶ್ರೀಶೈಲಕ್ಕೆ ಹೊರಟನು. ಶ್ರೀಶೈಲದಲ್ಲಿ ತಾನು ಹೊಲದಲ್ಲಿ ಕಂಡ ಮಲ್ಲಯ್ಯ(ಜಂಗಮ) ಕಾಣದಾದಾಗ ರುದ್ರಗಮ್ಮರಿಯಲ್ಲಿ ನೆಗೆದು ಆತ್ಮಾರ್ಪಣೆ ಮಾಡುವವದೆಂದು ನಿಶ್ಚಯಿಸಿ ಸಿದ್ಧನಾದಾಗ ಮಲ್ಲಯ್ಯನ ದರ್ಶನ ಹೊಂದುವನು. ಮಲ್ಲಯ್ಯನ ಆಜ್ಞೆಯಂತೆ ಸೊನ್ನಲಾಪುರಕ್ಕೆ ಬಂದು ಕರ್ಮ ಯೋಗದ ದೀಕ್ಷೆ ಹೊಂದಿ ದೇವಾಲಯ ನಿರ್ಮಾಣ ಲಿಂಗಸ್ಥಾಪನೆ ಕಾರ್ಯಗಳನ್ನು ತನ್ನಣ್ಣ ಬ್ರೊಮ್ಮಯ್ಯನೊಂದಿಗೆ ದೀಕ್ಷೆ ವಹಿಸಿ ಮಾಡಿದನು. ಸ್ಥಾವರಲಿಂಗ ಪೂಜೆಗೆ ಆದ್ಯತೆಯನ್ನಿತ್ತು, ಕೆರೆ ಕಟ್ಟಿಸುವ, ಮತ್ತು ಜನಹಿತ ಕಾರ್ಯಗಳಲ್ಲಿ ತೊಡಗಿಕೊಂಡಿದ್ದನು. ದಾನಧರ್ಮಗಳನ್ನು ಅವ್ಯಾಹತವಾಗಿ ಮಾಡುತ್ತಾನೆ. ಲೋಕ ಕಲ್ಯಾಣವೇ ಆತನ ಗುರಿ.

ವ್ಯಷ್ಟಿಯ ಕಲ್ಯಾಣವು ಸಮಷ್ಟಿ ಕಲ್ಯಾಣಕ್ಕೆ ಪೂರಕವಾಗಬೇಕೇ ಹೊರತು ಸಮಷ್ಟಿ ಕಲ್ಯಾಣವು ವ್ಯಷ್ಟಿಯ ಕಲ್ಯಾಣಕ್ಕೆ ತೊಡಕಾಗಬಾರದು. ಅರಿತೊಡೆ ಶರಣ ಮರೆತೊಡೆ ಮಾನವ ಅಲ್ಲವೇ? ಬಹಿರಂಗ ಕ್ರಿಯೆಯಲ್ಲಿ ನಿರತನಾಗಿದ್ದ ಸಿದ್ಧರಾಮನನ್ನು ಕೆರೆಯ ದುರಸ್ತಿ ಸಂದರ್ಭದಲ್ಲಿ ಅಲ್ಲಮ ಸಿದ್ಧರಾಮನನ್ನು ವಡ್ಡರಾಮ ಎಂದು ಸಂಬೋಧಿಸಿ ಅವನ ಅಂತರ್ಯವನ್ನು ಕೆಣಕಿ, ಒಳಗಣ್ಣನ್ನು ತೆರೆಸುತ್ತಾನೆ. ತಮ್ಮೊಂದಿಗೆ ಕಲ್ಯಾಣಕ್ಕೆ ಕರೆತಂದು ಬಸವಣ್ಣನನ್ನು ಭೇಟಿ ಮಾಡಿಸಿ, ಇಷ್ಟಲಿಂಗ ದೀಕ್ಷೆ ಮಾಡಿಸಿದರು. ಕರ್ಮಯೋಗದಿಂದ ಶಿವಯೋಗದ ಕಡೆಗೆ ಸಿದ್ಧರಾಮ ಸಾಗಿದನು. **'ಧ್ಯಾನ ಮೌನ ನೇಮ ನಿತ್ಯ ಶೀಲ ವ್ರತದಾರರಲ್ಲಿ ತದ್ಗತನಾಗಿಪ್ಪುದೇ ಸಮಾಧಿ ಇಂತಿಪ್ಪದೀಗ ಶಿವಯೋಗ'** ಎನ್ನುತ್ತಾನೆ. ವೀರಶೈವ ದೀಕ್ಷೆ ಹೊಂದಿ, ಕಾಯಕಕ್ಕೆ ಇನ್ನೂ ಹೆಚ್ಚು ಮಹತ್ವ ಕೊಟ್ಟು ಸಮಾಜ ಸುಧಾರಣೆಗೆ ಜನಹಿತ ಕಾರ್ಯಗಳಿಗೆ, ಸಾಮಾಜಿಕ ಮೌಢ್ಯ ನಿವಾರಣೆಗೆ ಸಾಧಕರಾಗಿ ತಮ್ಮ ಅನುಭವಗಳನ್ನು ವಚನರೂಪದಲ್ಲಿ ವ್ಯಕ್ತಪಡಿಸಲು ಆರಂಭಿಸಿದ. ವೀರಶೈವ ಆಂದೋಲನಕ್ಕೆ ಹೆಚ್ಚು ಪ್ರಾಶಸ್ತ್ಯ ಈತನಿಂದ ದೊರೆಯಿತು. ಲೌಕಿಕತೆಯಿಂದ ಆಧ್ಯಾತ್ಮದೆಡೆಗೆ ಸಾಗಿದನು. ಅದಕ್ಕಾಗಿ ಅಲ್ಲಮನ ಭೇಟಿಯಿಂದ ಸಿದ್ಧರಾಮ ದ್ವೈತಿಯಾಗಿದ್ದವ ಅದ್ವೈತಿಯಾದ, ಚನ್ನಬಸವಣ್ಣನಿಂದ ಇಷ್ಟಲಿಂಗದೀಕ್ಷೆ ಹೊಂದಿ ವೀರಶೈವ ಸಾಧಕನಾದ.

ಜೀವದಯೆ ಸಿದ್ಧರಾಮನ ವಿಶೇಷ ಗುಣ. ದೀನರಿಗೆ ಸಹಾಯ ಮಾಡುವುದು, ಜೀವಿಗಳನ್ನು ರಕ್ಷಿಸುವುದು ಧರ್ಮ, ತಾಯಿ ಬೆಕ್ಕು ಸತ್ತಾಗ ಮರಿಗಳ ದುಃಖ ನೋಡದೇ ತಾಯಿ ಬೆಕ್ಕನ್ನು ಬದುಕಿಸಿದ್ದು, ಕಾಳಿಯಜ್ಜಿ ಎಂಬ ಶಿಷ್ಯೆಗೆ ಸರ್ಪ ಕಚ್ಚಿದಾಗ ಅವಳ ಮೊಮ್ಮಕ್ಕಳ ದುಃಖ ನೋಡದೇ ಬದುಕಿಸಿದ್ದು ನೀರಲ್ಲಿ ಮುಳುಗಿತ್ತಿದ್ದ ಬಾಲಕನನ್ನು ರಕ್ಷಿಸಿದ್ದು ಇವೆಲ್ಲ ಜೀವದಯೆ ಉದಾಹರಣೆಗಳು.

**ಸಮಾಜವ್ಯವಸ್ಥೆ :** ಅಂದಿನ ಸಮಾಜ ವ್ಯವಸ್ಥೆಯಲ್ಲಿದ್ದ ಗೊಡ್ಡು ಸಂಪ್ರದಾಯಗಳನ್ನು ಖಂಡಿಸಿ-

*ಒಬ್ಬರ ಮನನೋಯಿಸಿ ಒಬ್ಬರ ಮನೆಯ ಘಾತವ*
*ಮಾಡಿ ಗಂಗೆಯ ಮುಳುಗಿದೊಡೇನಾಗುವುದಯ್ಯಾ*
*ಚಂದ್ರನು ಗಂಗೆಯ ತಡಿಯಲಿದ್ದಡೇನು ಕಳಂಕ*
*ಬಿಡದಾಯಿತ್ತಯ್ಯ. ಅದು ಕಾರಣ ಮನವ*
*ನೋಯಿಸದವನೆ ಒಬ್ಬರ ಘಾತವ ಮಾಡದವನೆ*
*ಪರಮ ಪಾವನ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ'*

ಇನ್ನೊಬ್ಬರಿಗೆ ಮನವ ನೋಯಿಸದವನೇ ನಿಜವಾದ ಮನುಷ್ಯ ಎನ್ನುತ್ತಾನೆ.

ಕುಲ ಕುಲ ಎಂದು ಬಡಿದಾಡುವ ಅಂದಿನ ಇಂದಿನ ಮಾನವ ಜನಾಂಗಕ್ಕೆ-'ಕುಲದಲ್ಲಿ ಶೂದ್ರನಾದೊಡೇನು? ಮನದಲ್ಲೆ ಮಹಾದೇವ ನೆಲೆಗೊಂಡವನೇ ವೀರಶೈವ ನೋಡಾ' ಎಂದು ಹೇಳಿದ ಸಿದ್ಧರಾಮ.

*'ಕುಲವೆಂದು ಹೋರಾಡುವ ಅಣ್ಣಗಳಿರಾ*
*ಕೇಳಿರೋ? ಕುಲವೇ ಡೋಹರನ? ಕುಲವೇ*
*ಮಾದಾರನ ? ಕುಲವೇ ದೂರ್ವಾಸನ ?*
*ಕುಲವೇ ವ್ಯಾಸನ ? ಕುಲವೇ ವಲ್ಮೀಕರ?*
*ಕುಲವೇ ಕೌಂಡಿನ್ಯನ? ಕುಲವ ನೋಳ್ಪಡೆ ಹುರುಳಿಲ್ಲ*
*ಅವರ ನಡೆ ನೋಳ್ಪರೇ? ನಡೆಯುವರು*
*ತ್ರಿಲೋಕದಲ್ಲಿಲ್ಲ ಕಪಿಲಸಿದ್ಧಮಲ್ಲಿಕಾರ್ಜುನ.*

ವ್ಯಕ್ತಿಯ ಹುಟ್ಟು ಮುಖ್ಯವಲ್ಲ. ಅವನ ಸಾಧನೆ ಸದ್ಭಾವನೆ ಕುಲದ ಗುಟ್ಟು, ಅವರ ಬಾಳಿದ ರೀತಿ ಮುಖ್ಯ.

*'ಕುಂಬಾರರೆಲ್ಲ ಗುಂಡಯ್ಯನಾಗಬಲ್ಲರೇ?*
*ಮಡಿವಾಳರೆಲ್ಲರೂ ಮಾಚಯ್ಯನಾಗಬಲ್ಲರೇನಯ್ಯಾ*
*ಜೇಡರೆಲ್ಲರೂ ದಾಸಿಮಯ್ಯನಾಗಬಲ್ಲರೇ*
*ಎನ್ನಗುರು ಕಪಿಲಸಿದ್ಧಮಲ್ಲೇಶ್ವರಯ್ಯಾ...'*

ಹುಟ್ಟಿದ ಕುಲವೇ ಗಣ್ಯವಾದರೆ ಕುಂಬಾರ ಜಾತಿಯಲ್ಲಿ ಹುಟ್ಟಿದವರೆಲ್ಲರೂ ಗುಂಡಯ್ಯರಾಗುವರೇ? ಎಂಬಿತ್ಯಾದಿ ಪ್ರಶ್ನಿಸಿ ಹುಟ್ಟಿದ ನೆಲೆ, ಮಾಡುವ ವೃತ್ತಿ ಮುಖ್ಯವಲ್ಲ. ಹುಟ್ಟಿದ ನೆಲೆ ದಾಟಿ ಶಿವಶರಣರಾಗಿ, ಗುರು-ಲಿಂಗ-ಜಂಗಮ ತೃಪ್ತಿಯಾಗಿ ಕಾಯಕ ಮಾಡಿದವರಿಂದ ಅವರು ಹುಟ್ಟಿದ ಕುಲ ಶ್ರೇಷ್ಠವಾಯಿತು. ಇದೆಂಥ ಪ್ರಭಾವಶಾಲಿ ನುಡಿ!

*ದೂರ್ವಾಸನ ಮಚ್ಚಿಗ, ಊರ್ವಶಿಯಾಕೆ*
*ದೇವಾಂಗನೆ ಚಂಡಾಲನವ ಪರಾಶರ, ಕುಸುಮಗಂಧಿ*
*ಯಾಕೆ ಕಬ್ಬಿಲಗಿತ್ತಿ*
*'ಜಪತಸ್ತ ಸತೋಗುಣತಃ' ಕಪಿಲಸಿದ್ಧಮಲ್ಲಿಕಾರ್ಜುನ*
*ಕೇಳಾ ಸ್ಪೃಶ್ಯ-ಅಸ್ಪೃಶ್ಯರ ನಡುವಿನ ಸಂಬಂಧದ*
*ವಿಚಾರ ಇಲ್ಲಿ ಬಂದಿವೆ. ಹಾಗೆ ಪ್ರತಿಯೊಬ್ಬನ ಕುಲವ*
*ಎತ್ತಾಡದೇ ಅವನಲ್ಲಿ ಬದುಕಿನ ಆತ್ಮಸ್ಥೈರ್ಯವ*
*ತುಂಬಬೇಕು ಎಂಬುದನ್ನು ಕುಲದಲ್ಲಿ*
*ಶೂದ್ರನಾದಡೇನು? ಮನದಲ್ಲಿ ಮಹಾದೇವ ನೆಲೆ*
*ಗೊಂಡವನೇ ವೀರಶೈವ ನೋಡಾ'* ಎಂದಿದ್ದಾನೆ.

**ಸ್ತ್ರೀಬಗ್ಗೆ-** ಸ್ತ್ರೀಯ ಧಾರ್ಮಿಕ ಸ್ವಾತಂತ್ರ್ಯದ ಬಗ್ಗೆ ಲಿಂಗ ಪೂಜೆಯ ಹಕ್ಕಿನ ಬಗ್ಗೆ ಸಿದ್ಧರಾಮ ಈ ರೀತಿ ಹೇಳುತ್ತಾನೆ.

*'ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು*
*ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಗೆಯನ್ನೇರಿತ್ತು*
*ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು*
*ಅದು ಕಾರಣ ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ'*

* ವಿಶ್ರಾಂತ ಉಪನ್ಯಾಸಕರು, 'ಜ್ಯೋತಿರ್ಲಿಂಗ', ೧ನೇ ತಿರುವು, ಹೈಸ್ಕೂಲ್ ಬಡಾವಣೆ, ಶಿವಮೊಗ್ಗ ರಸ್ತೆ, ಹೊನ್ನಾಳಿ-೫೭೭೨೧೭.

ಸ್ತ್ರೀಯನ್ನು ಸಾಕ್ಷಾತ್ ದೇವಿ ಸ್ವರೂಪ ಎಂಬುದಾಗಿ ವರ್ಣಿಸಿರುವುದನ್ನು ಈ ವಚನದಲ್ಲಿ ಕಾಣಬಹುದು. ವೇಶ್ಯೆಯೊಬ್ಬಳು ಸಿದ್ಧರಾಮನನ್ನು ಮದುವೆಯಾಗಲು ಬಯಸಿ ನಿಮ್ಮನ್ನು ತುಂಬಾ ಪ್ರೀತಿಸುತ್ತೇನೆ ಎಂದಾಗ ಸಿದ್ಧರಾಮ ಕೂಡಾ ನಾನೂ ನಿನ್ನನ್ನು ತುಂಬಾ ಪ್ರೀತಿಸುತ್ತೇನೆ ತಂಗಿ ಎಂದಾಗ ಅವಳು ತಪ್ಪಿನ ಅರಿವಾಗಿ ಸಿದ್ಧರಾಮನನ್ನು ಗುರುವಾಗಿ ಸ್ವೀಕರಿಸಿದಳು.

ಮನದ ಸ್ಥಿರತೆ– ಸಿದ್ಧರಾಮ ಎಂದೂ ಮನಸ್ಸನ್ನು ವಿಚಲಿತರನ್ನಾಗಿ ಮಾಡಲಿಲ್ಲ

*'ಆರೇನೆಂದರೂ ಓರಂತಿಪ್ಪುದೇ ಸಮತೆ*
*ಆರು ಜರಿದರೂ ಅವರೆನ್ನ ಮನದ ಕಾಳಿಕೆಯ*
*ಕಳೆದರೆಂಬುದೇ ಸಮತೆ!*
*ಆರು ಸ್ತೋತ್ರ ಮಾಡಿದರೂ ಅವರೆನ್ನ ಜನ್ಮದ*
*ಹಗೆಗಳೆಂಬುದೇ ಸಮತೆ*
*ಇಂತಿಯ ಗುರುಕಾರುಣ್ಯ ಮನವಚನ*
*ಕಾಯದಲ್ಲಿ ಆಹತವೆಲ್ಲಿದೇ*
*ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮವರ*
*ಸೇವೆಯೆಂಬುದೇ ಸಮತೆ'*

ಜರಿದವರು ನಮ್ಮ ಮನಸ್ಸಿನ ಕಾಳಿಕೆಯನ್ನು ನಿಂದೆ ಎಂಬ ಪೊರಕೆಯಿಂದ ಕಳೆದರೆಂದು, ಹೊಗಳಿದವರು ನಿಮ್ಮ ಅಹಂಕಾರಕ್ಕೆ ನೀರು ಎರೆದವರೆಂದು ಭಾವಿಸಬೇಕು. ಮೈ–ಮನ–ಮಾತುಗಳೆಂಬ ತ್ರಿಕರಣಗಳಿಂದ ದುಷ್ಕೃತಿ ಮಾಡಿದರೆ ಪಾಪ, ಸತ್ಕೃತಿ ಮಾಡಿದರೆ ಪುಣ್ಯ, ನೀತಿಯನ್ನು ಅಳವಡಿಸಿಕೊಂಡು ದೇವರನ್ನು ಸಾಕ್ಷಾತ್ಕಾರಗೊಳಿಸಿಕೊಂಡು ನಿಜದಲ್ಲಿ ನಿಲುಗಡೆ ಹೊಂದುವುದೇ ಯೋಗ. ಈ ಯೋಗ ಸಾಧನೆಗೆ ಚಿತ್ತಸಮತೆ ಅವಶ್ಯ.

*ಸಿರಿಯಾಯಿತ್ತೆಂದು ಉತ್ಸಾಹದಿಂದುಬ್ಬದೆ*
*ಕೆಟ್ಟಿತ್ತೆಂದು ಮನನೊಂದು ಖಿನ್ನವಾದಂತಿರದೆ*
*ಮನ ವಿಚ್ಛಂದವಾಗದೊಂದೆಯಲದಲ್ಲಿ ಪುಂತಪ್ಪ*
*ನಿಮ್ಮದೊಂದು ಸಮತಾಗುಣ ಎನ್ನನೆಂದು*
*ಹೊದ್ದಿಪ್ಪುದು ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನ*

ಇದು ಸಿದ್ಧರಾಮನ ಸಮತೆಯ ವೈಶಿಷ್ಟ್ಯ ಸಾಧನೆಯ ಫಲದಿಂದ ಸಮತೆ.

ಸಿದ್ಧರಾಮ, ಅಲ್ಲಮಪ್ರಭು, ಬಸವಣ್ಣ, ಚನ್ನಬಸವಣ್ಣನವರ ಸಮಕಾಲೀನನಾಗಿದ್ದು, ಅನುಭಾವಿ ಆಗಿದ್ದನು. ಸೊಡ್ಡಳ ಬಾಚರಸನಿಂದ 'ಯೋಗಿಗಳ ಯೋಗಿ, ಶಿವಯೋಗಿ ಎಂದೂ, ಮರುಳಶಂಕರದೇವನಿಂದ 'ಶುದ್ಧ ಸಿದ್ಧ ಪ್ರಸನ್ನ ಪ್ರಭುವೆ... ಸಿದ್ಧರಾಮಯ್ಯನ ಕಂಡು ಶಿಖಿ–ಕರ್ಪೂರದ ಯೋಗದಂತಾದೆಯಯ್ಯಾ ನಿಮ್ಮ ಧರ್ಮ' ಎಂದೂ ಅನುಪಮ ಸಾಧನೆಯಿಂದ ಅಲೌಕಿಕ ಶಕ್ತಿ ಪಡೆದ ಮಹಾಸಾಧಕ.

ಡಾ॥ ಎಚ್. ತಿಪ್ಪೇರುದ್ರಸ್ವಾಮಿಯವರು ತಮ್ಮ ಸೊನ್ನಲಿಗೆ ಸೊಡರು ಗ್ರಂಥದಲ್ಲಿ 'ಕಲ್ಯಾಣದಲ್ಲಿ ಸಂಭವಿಸಿದ ಹಠಾತ್ ಕ್ರಾಂತಿಯಿಂದ ಅಲ್ಲಿನ ಕಾರ್ಯಸೌಧ ಕುಸಿದು ಬಿದ್ದಾಗ, ಸಿದ್ಧರಾಮರು ವಹಿಸಿದ ಪಾತ್ರ ಮಹತ್ವದ್ದು. ಒಂದು ಕಡೆ ಶರಣರ ವಧೆ ಮತ್ತು ಬಿಜ್ಜಳನ ಕೊಲೆ ಇನ್ನೊಂದೆಡೆ ಬಸವಣ್ಣನವರ ಐಕ್ಯ ಮತ್ತು ಉಳವಿಯತ್ತ ಚನ್ನಬಸವಣ್ಣರಾದಿಯಾಗಿ ಶರಣರ ನಿರ್ಗಮನ. ಚನ್ನ ಬಸವಣ್ಣನವರು ಹೋಗದಾಗ ಕಲ್ಯಾಣದ ಮಹಾಮನೆಯ ಪರಂಪರೆಯನ್ನು ಸೊನ್ನಲಿಗೆಯಲ್ಲಿ ಬಿಟ್ಟು ಹೋದಂತೆ ಕಾಣಿಸುತ್ತದೆ. ಈ ಅರ್ಥದಲ್ಲಿ ಚನ್ನಬಸವಣ್ಣನ ಉತ್ತರಾಧಿಕಾರಿ ಸಿದ್ಧರಾಮರೆಂದು ಹೇಳಬಹುದು.

ಸೊಲ್ಲಾಪುರ, ರಾಮನಗರ ತಾಲ್ಲೂಕು ರೇವಣಸಿದ್ದೇಶ್ವರ ಬೆಟ್ಟ, ಚಿಕ್ಕನಾಯಕನಹಳ್ಳಿ ತಾಲ್ಲೂಕು ಗೋಡೇಕೆರೆಯಲ್ಲಿ ದೇವಾಲಯ, ಬಸವಕಲ್ಯಾಣದಿಂದ ಒಂದು ಮೈಲು ದೂರದ ಶಿವಪುರದಲ್ಲಿ ದೇವಾಲಯ, ಸಿದ್ಧಗಂಗಾ ಬೆಟ್ಟದ ಸಮೀಪ ಇರುವ ಬೆಳಗುಂಬ ಬೆಟ್ಟ, ಸಿದ್ಧರಾಮನ ದೇವಾಲಯಗಳು. ಧಾರವಾಡ ಜಿಲ್ಲೆ ಹಾನಗಲ್ ತಾಲ್ಲೂಕು ಕಿರವಾಡಿಯಲ್ಲಿ, ಬ್ಯಾಡಗಿ ತಾಲ್ಲೂಕು, ಚಿಕ್ಕಬಾಸೂರಿನಲ್ಲಿ, ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕು ಬುಳಸಾಗರದಲ್ಲಿ, ಚಿಕ್ಕಮಗಳೂರು ಜಿಲ್ಲೆ ತರಿಕೆರೆ ತಾಲ್ಲೂಕು ಸೊಲ್ಲಾಪುರದಲ್ಲಿ, ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು ಎಳನಾಡುಗಳಲ್ಲಿ ಕಾಣಬಹುದು. ಸುಮಾರು ೭೭ ಸಿದ್ಧರಾಮರ ಕ್ಷೇತ್ರಗಳು ಕರ್ನಾಟದಲ್ಲಿವೆ.

ಶ್ರೀ ಗುರುಸಿದ್ಧರಾಮರ ಮಹಾಕ್ಷೇತ್ರ ಮಹಾರಾಷ್ಟ್ರದ ಸೊಲ್ಲಾಪುರ(ಸೊನ್ನಲಿಗೆ) ಕರ್ನಾಟಕ ರಾಜ್ಯದಲ್ಲಿ





ಚಿಕ್ಕಮಗಳೂರು ಜಿಲ್ಲೆ, ತರಿಕೆರೆ ತಾಲ್ಲೂಕು ಅಜ್ಜಂಪುರದಿಂದ ಸುಮಾರು ೫ ಕಿ.ಮೀ. ದೂರದಲ್ಲಿ ಸೊಲ್ಲಾಪುರ ಎಂಬ ಗ್ರಾಮವಿದೆ. ಇಲ್ಲಿ ಜನಪದರ ಆರಾಧ್ಯದೈವ ಸಿದ್ಧರಾಮ.

*ಗಂಗಮ್ಮನ ಕೆರೆಯಾಗೆ ನಿಂತಿರುವರ್ಯ್ಯಾರೆ*
*ಗೊಂಬೆ ಹಚ್ಚಣದ ಶರಣ ಸಿದ್ಧರಾಮಯ್ಯ*
*ನಿಂತಲ್ಲಿ ಮಳೆಯನು ತರುವರ್ಯ್ಯಾರೆ*
*ನೆಲೆ ನಿಂತ ಶರಣ ಸಿದ್ಧರಾಮಯ್ಯ*

ಸಿದ್ಧರಾಮ ಸೊಲ್ಲಾಪುರಕ್ಕೆ ಬಂದಾಗ ಕಾಡಿನ ಪ್ರದೇಶ ಎಲ್ಲ ಕಡೆಗೆ ಬಿದಿರುಮೆಳೆ. ಸಿದ್ಧರಾಮ ಶಿಷ್ಯರು ಒಂದೆಡೆ ಕುಳಿತು ವಿಶ್ರಾಂತಿ ಪಡೆಯುತ್ತಿದ್ದರು. ಅವರಿಗೆ ನೀರಿನ ಅವಶ್ಯಕತೆ ಇತ್ತು. ಅಲ್ಲಿ ಹರಡಿದ್ದ ಮರಳನ್ನು ತಂದು ಒಂದು ಭಾಗದಲ್ಲಿ ಕಟ್ಟೆಕಟ್ಟಿ ಅದರಲ್ಲಿ ಸ್ವಲ್ಪ ನೀರು ಸುರಿದ. ತುಂಡು ಬಟ್ಟೆಯನ್ನು ಬತ್ತಿಯಂತೆ ಹೊಸೆದು ಕಟ್ಟೆಯಲ್ಲಿಟ್ಟನು. ಅವನ ಭಾವನೆಯಲ್ಲಿ ಇದು ಹಣತೆ. ಶಿವನ ಜಡೆಯಲ್ಲಿರುವ ಗಂಗೆಯ ಮುಂದಿನ ಜ್ಯೋತಿ. ನಂತರ ಗಂಗೆಯನ್ನು ಸಾಕ್ಷಾತ್ಕಾರಗೊಳಿಸಿಕೊಂಡನು. ಕಣ್ಣುಮುಚ್ಚಿ ಧ್ಯಾನಾಸಕ್ತನಾಗಿ ಕುಳಿತ. ಎಷ್ಟೋ ಕಾಲದ ನಂತರ ಗುಪ್ತಗಾಮಿನಿ ಯಾಗಿದ್ದ ಗಂಗೆ ಚಿಮ್ಮಿದಳು. ಕಟ್ಟೆ ತುಂಬಿ ಉಕ್ಕಿದಾಗ ಸಿದ್ಧರಾಮನಿಗೆ ಎಚ್ಚರ. ಈಗಲೂ ಆ ಸ್ಥಳದಲ್ಲಿ ಕೆರೆ ಇದೆ. ಗಂಗಮ್ಮನ ಕೆರೆ ಎನ್ನುವರು. ಊರಿಗೆ ಸುಡು ಬಿಸಿಲು ಕಾಯುತ್ತಿತ್ತು. ಮಳೆಯಿಲ್ಲದೆ ಹಾಹಾಕಾರ, ಊರುಬಿಟ್ಟು ಹೊರಡಲು ರೈತರು ಜನರು ಸಿದ್ಧವಾದರು. ಅವರೆಲ್ಲರ ಬಂಧುವಿನಂತೆ ಆಪದ್ಬಾಂಧವನಂತೆ ಸಿದ್ಧರಾಮ ಬಂದನು. ಪ್ರಾರ್ಥನೆ ಮಾಡಿ ಮಳೆ ತರಿಸಿದ. ಸಿದ್ಧರಾಮನಿಂದ ಸೊಲ್ಲಾಪುರ ಎಂದು ಹೆಸರು ಆ ಊರಿಗೆ ಬಂತು. ಸೊಲ್ಲು ಎಂದರೆ ಶಬ್ದ. ಸಿದ್ಧರಾಮ ಗಂಗೆಯನ್ನು ಕರೆದದ್ದರಿಂದ ಸೊಲ್ಲಾಪುರವಾಯಿತು.

ಸಿದ್ಧರಾಮ ಸೊಲ್ಲಾಪುರಕ್ಕೆ ಹೊಸದುರ್ಗದಿಂದ (ಮಧುರೆ ಗ್ರಾಮ) ಬಂದನು. ಈತನೊಂದಿಗೆ ಅಕ್ಕನಾಗಮ್ಮ ನುಲಿಯ ಚಂದಯ್ಯ ಶಿವಶರಣರು ಬಂದರು ತರಿಕೆರೆ ಹತ್ತಿರದ ಎಣ್ಣೆಹೊಳೆಯಲ್ಲಿ ಅಕ್ಕನಾಗಮ್ಮನವರ ಗವಿ ಇದೆ. ಲಿಂಗದಹಳ್ಳಿ ಮಾರ್ಗದಲ್ಲಿ ಬರುವ ನಂದಿ ಮಾರ್ಗದಲ್ಲಿ ನುಲಿಯ ಚಂದ್ರಯ್ಯನವರ ಗದ್ದುಗೆ ಇದೆ. ಹಾಗೆ ಶಿವಪುರದಲ್ಲಿ ಸಿದ್ಧರಾಮರ ಗದ್ದುಗೆ ಇದೆ.

ಮಹಾಯೋಗಿ ಶ್ರೀ ಸಿದ್ಧರಾಮ ಹನ್ನೆರಡನೆಯ ಶತಮಾನದಲ್ಲಿಯ ಅದ್ಭುತ ಮಹಾಪುರುಷ. ಅಲ್ಲಮನನ್ನು ತನ್ನೆಡೆ ಸೆಳೆದುಕೊಂಡ ಯೋಗಸಿದ್ಧ. ಸೊಲ್ಲಾಪುರವನ್ನು ಶ್ರೀಶೈಲವನ್ನಾಗಿ ಮಾಡಿದ ಕಾಯಕಯೋಗಿ. ಕನ್ನಡನಾಡಿನಲ್ಲೆಲ್ಲ ಸಂಚರಿಸಿ, ಜನತೆಗೆ ಮಾರ್ಗದರ್ಶನ ಮಾಡಿ ವಚನಗಳನ್ನು ಶಿಲಾಶಾಸನಗಳಲ್ಲಿ ಉದಯಿಸಿ ಶಿವಶರಣರ ಮಹಿಮೆಗಳನ್ನು ಸಾರುತ್ತ ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿದ ಶಿವಸಂಚಾರಿ. ತನ್ನ ವಚನ ತ್ರಿವಿಧ ಶಾಸನಗಳ ಮೂಲಕ ಮಾನವಕುಲದ ಅಭ್ಯುದಯಕ್ಕೆ ಎಂದಿಗೂ ಪ್ರಸ್ತುತವಾದ ನೆರಳಾಚೆಯ ಬೆಳಗು. ಇಂದಿಗೂ ಶ್ರೀ ಸಿದ್ಧರಾಮನ ಜಯಂತಿಯನ್ನು ಸೊಲ್ಲಾಪುರ, ಶ್ರೀಶೈಲ, ಹಂಪೆ, ಚಿತ್ರದುರ್ಗ, ತರಿಕೆರೆ, ಗುಡ್ಡಾಪುರ, ತುಮಕೂರು ಜಿಲ್ಲೆಯ ತಿಪಟೂರು, ಗೋಡೆಕೆರೆ ಹಲವೆಡೆಗಳಲ್ಲಿ ಆಚರಿಸುತ್ತಿರುವುದು ಯೋಗಶಕ್ತಿಯ ಪ್ರಭಾವದಿಂದ.

❖

## 'ಸಿದ್ಧಗಂಗಾ' ಮಾಸಪತ್ರಿಕೆ ಚಂದಾದಾರರಲ್ಲಿ ಮನವಿ

೨೦೧೩ರ ನಿಮ್ಮ ವಾರ್ಷಿಕ ಚಂದಾ ಅವದಿ ಮುಗಿದಿರುವ ಸದಸ್ಯರುಗಳು ೨೦೧೪ನೇ ಸಾಲಿಗೆ ನವೀಕರಿಸಿಕೊಳ್ಳ ಬೇಕಾಗಿ ವಿನಂತಿ.

ನಿಮ್ಮ ವಿಳಾಸ ಬದಲಾವಣೆ ಆದ ಕೂಡಲೆ ಹೊಸ ವಿಳಾಸವನ್ನು **ಚಂದಾ ನಂಬರ್** ತಪ್ಪದೇ ಸೂಚಿಸಿ ಈ ಕೆಳಕಂಡ ವಿಳಾಸಕ್ಕೆ ಪತ್ರ ಮೂಲಕ ತಿಳಿಸಬೇಕಾಗಿ ನಮ್ರ ವಿನಂತಿ.

ವಾರ್ಷಿಕ ಚಂದ ರೂ. **೨೦೦/–** ಆಜೀವ ಚಂದಾ ರೂ. **೧೦೦೦/–** **'ಸಿದ್ಧಗಂಗಾ'** ನಿಮ್ಮ ಮನೆ ನಿರಂತರವಾಗಿ ಬೆಳಗಲು ಆಜೀವ ಸದಸ್ಯತ್ವ ಪಡೆಯಿರಿ. ಚಂದಾ ಹಣವನ್ನು ಈ ವಿಳಾಸಕ್ಕೆ ಕಳುಹಿಸಿರಿ.

**ಪ್ರಕಾಶಕರು**
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –೫೭೨ ೧೦೪.

## ಹೊಸವರ್ಷದ ಹೊಸ್ತಿಲಲ್ಲಿ...

–ವೈದೇಹಿ *

ಅದದೇ ಸುದ್ದಿ. ದಿನದಿನಕ್ಕೆ ಹೆಚ್ಚುವ ಅದೇ ಮತ್ತು ಅದೇ. ಮೊನ್ನೆ ಕುಗ್ರಾಮವೊಂದರಲಿ, ನಿನ್ನೆ ದೆಹಲಿಯಂಥಲ್ಲಿ, ಇಂದು ಇನ್ನೊಂದೇ ಕಡೆ. ಹೆಣ್ಣು ಮತ್ತು ಅತ್ಯಾಚಾರ. ಒಮ್ಮೆ ಬೊಬ್ಬೆ ಏಳುತ್ತದೆ. ನಿಧಾನ ಸುದ್ದಿ ಮಾಸುತ್ತದೆ. ಇಂಥದೇ ಮತ್ತೊಂದು ಸುದ್ದಿ ಬರುವವರೆಗೂ ವಾತಾವರಣ ತಿಳಿಯಾಗಿದೆ. ಸಹಜಕ್ಕೆ ಮರಳಿದೆ'.

'ಹೆಣ್ಣು ಹೆರಲು ಭಯ. ಮಗು ಹೆಣ್ಣಾದರೆ, ಬೇಡಪ್ಪ ತೆಗೆದುಬಿಡಿ' ಹೊಸತೇ ಕಾರಣವೊಂದು ಭ್ರೂಣಹತ್ಯೆಯ ಪರವಾಗಿದೆ. ಹಿಂಸಮೃಗಗಳು ಕಾಡಿನಲ್ಲಿರುತ್ತವೆ ಅಂತ ಎಣಿಸಿದ್ದೆವು. ಅದೀಗ ತಪ್ಪು ಗ್ರಹಿಕೆ. ನಾಡಿನಲ್ಲೇ ಅತ್ತ ಇತ್ತ ಸನಿಹದಲ್ಲೇ ಸುಳಿವೇ ಹತ್ತದಂತೆ ಇವೆ ಅವು. ಹೆಣ್ಣುಮಕ್ಕಳ ಬೇಟೆಯಾಡುತ್ತಿವೆ.

ಒಂದೆಡೆ ಪುಂಡಪೋಕರಿಗಳು ಇನ್ನೊಂದೆಡೆ ಸಂಸ್ಕೃತಿಯ ಗುತ್ತೇದಾರರು. ಈ ಎಲ್ಲದರ ನಡುವೆ ಕಡೆಗೂ ನಲುಗುವವಳು ಹೆಣ್ಣು. ಸ್ವಚ್ಛಂದ ಬದುಕನ್ನು ಆಯ್ದುಕೊಂಡ ಯುವಕ ಯುವತಿಯರಲ್ಲಿಯೂ ಪರಿಣಾಮ ಎದುರಿಸ ಬೇಕಾದವಳು ಕೊನೆಗೂ ಹೆಣ್ಣೇ. ಸಮಾಜ ಹಾಗಿದೆ. ಮತ್ತವಳು ತಲೆ ಎತ್ತದಂತೆ ನೂರಾರು ಹೀನೈಕೆಗಳು ಆಕೆಯನ್ನು ಜೀವನದುದ್ದಕ್ಕೂ ಮನೆಯೊಳಗೂ ಹೊರಗೂ ಬೆನ್ನಟ್ಟಿಕೊಂಡೇ ಇರುತ್ತವೆ. ಅವಳ ಕುಸಿದ ಆತ್ಮವಿಶ್ವಾಸವನ್ನು ಮರಳಿ ತರುವ ಹೊಣೆ ನಿಭಾಯಿಸುವುದು ಸುಲಭವೇನು?

ವಿದ್ಯೆ, ಬುದ್ಧಿ, ಉದ್ಯೋಗ, ಸ್ವಾವಲಂಬನೆ, ಆತ್ಮವಿಶ್ವಾಸ ಏನೇನು ಇದ್ದರೂ ಆಕೆ ಒಬ್ಬ ಅಪಾಪೋಲಿ ಗಂಡು ಮನಸ್ಸಿಗೆ (ಆತ ಪೋಕರಿಯಿರಲಿ, ಅಧಿಕಾರಯಿರಲಿ, ಮಂತ್ರಿಯಿರಲಿ, ಶಿಕ್ಷಿತ ಅಶಿಕ್ಷಿತ ಯಾವ ಪುಳುಕನೇ ಆಗಿರಲಿ) ಕಾಣಿಸುವುದು ಹೆಣ್ಣಾಗಿ ಪಾತ್ರ ಎಂಬುದೇ ಸ್ವತಂತ್ರ ಭಾರತದ ಹಣೆಬರಹ ಆಗಿಬಿಟ್ಟಿತೆ!

ಇಂದು ಹೆಣ್ಣನ್ನು ಸದಾ ಮರಮರಳಿ ಆಳುತ್ತಿರುವುದು ಒಂದೇ ಭಯ. ನಿರಂತರ ಭಯ. ಅವ್ಯಕ್ತ ಭಯ. ಸಂಜೆ ಹೊತ್ತಾಗಿ ಬರಲು ಬರಲು ಭಯ. ಬರುವವರಿಗೆ ಧೈರ್ಯ ವಿದ್ದರೂ ಮನೆಮಂದಿಗೆ 'ಯಾಕಿನ್ನೂ ಬಂದಿಲ್ಲ?' ಎಂಬ ಭಯ. 'ಹೇಳಿಕೊಳ್ಳಲು' ಹೇಳಿಕೊಳ್ಳಲಾರದಂಥ ಭಯವೇ ಎಷ್ಟೋ ಸಲ ಇನ್ನಿತರ ಭಯಗಳಿಗೆ ಮೂಲಕಾರಣವೂ ಆಗಿಬಿಡುವ ಅವಸ್ಥೆ. ಭಯಭಕ್ತಿ ಎಂಬ ಒಂದು ಜೋಡು ಶಬ್ದವಿದೆಯಲ್ಲ, ಅವುಗಳಂತಲ್ಲ ಇವು. ಒಳ ಚೇತನವನ್ನೇ ಹವನ ಮಾಡಿಬಿಡುವಂಥ ಹಿಂದೆಮುಂದಿಲ್ಲದ ಭಯ.

ವಿದ್ಯೆ ಉದ್ಯೋಗ ಆತ್ಮವಿಶ್ವಾಸ ಎಲ್ಲವಿದ್ದೂ ಇವತ್ತಿಗೂ ಈ ಮಾದರಿ ಭಯದ ಉಚ್ಚಾಟನೆ ಮಾತ್ರ ಸಾಧ್ಯವಿಲ್ಲ. ಕೆಲಸ ಮುಗಿಯಿತೆಂದು ನಿರ್ಭೀಡೆಯಿಂದ ಆಕೆ ಮನೆಗೆ ಹೊರಡುವಂತಿಲ್ಲ. ಕೆಲಸದ ಸಮಯಕ್ಕೆ ಸರಿಯಾಗಿ ಮನೆಯಿಂದ ನಿಸೂರಾಗಿ ಹೊರಡುವಂತಿಲ್ಲ. ನೈಸರ್ಗಿಕ ಉಲ್ಲಾಸವನ್ನೇ ಚಿವುಟಿ ಹಾಕುವ ಭಯದ ಹವೆಯಲ್ಲಿ ಸಂಜೆಮುಂದಿನ ವಿಹಾರ, ಕಾಲೇಜು ಪ್ರವಾಸ ಇತ್ಯಾದಿಗಳೆಲ್ಲ ಬಿಡಿ. ದಿನನಿತ್ಯದ ಸಿಟಿಬಸ್ಸಿನ ಪ್ರಯಾಣವೂ, ಕಾಲ್ನಡೆಯ ಸಮಯವೂ ದುಗುಡದ ಕ್ಷಣಗಳಾಗಿ ಮಾರ್ಪಟ್ಟಿವೆ. ಮರ್ಯಾದೆಗೆ ಹೆದರಿ ಎಷ್ಟು ಮಂದಿ ಹೆಣ್ಣುಮಕ್ಕಳು ಆತ್ಮ ಹತ್ಯೆಗೆ ಶರಣಾಗಿವೆ. ಮರ್ಯಾದೆಗೆ ಹೆದರುವುದೇ ನಮ್ಮ 'ದುರ್ಬಲಬಿಂದು' ಆಗುವ ವಿಚಿತ್ರ ದುರಂತವಲ್ಲವೇ ಇದು?

ಹೊರಗೆ ಹೋದ ಹೆಣ್ಣುಮಗಳು–ವಯಸ್ಸಿನ ಗಣನೆಯೇ ಇಲ್ಲದೆ– ಮನೆಗೆ ಬರುವ ತನಕ ಆತಂಕ. ಸಮಯದೊಳಗೆ ಬರದಿದ್ದರೆ ಮನೆಯೊಳಗೆ ಮೌನವಾಗಿ ಕವಿಯುವ ಭಯ. ತುಸು ತಡವಾದರೂ ಆವರಿಸುವ ಕೆಟ್ಟ ಕಲ್ಪನೆಗಳು. ಇಂಡಿಯಾ ಯಾಕೆ ಹೀಗಾಯಿತು? ಒಬ್ಬಳೇ ಎಂಬ ಪದವೇ ಭಯದ್ದಾಗಿ ಬಿಟ್ಟಿತೆ! ಯಾರ ಭಯವದು?

ಈಗಂತೂ 'ಮಗೂ ಜೋಪಾನ' ಎನ್ನುವುದು ತಂದೆ ತಾಯಿಯರ ನಿತ್ಯಮಂತ್ರವಾಗಿದೆ. ಯಾರ ಬಗ್ಗೆ? ಪ್ರಶ್ನೆ

* ಪತ್ರಿಕಾ ಅಂಕಣ ಬರಹಗಾರರು, ಬೆಂಗಳೂರು.





ಕೇಳುವುದಿಲ್ಲ ಆಕೆ. ಅದವಳಿಗೆ ತಿಳಿದಿರುವುದೆ. ತೆರೆದ ಬಾಗಿಲು ತೆರೆದಂತೆ ಕಾಣುವುದು ಮಾತ್ರ. ಆಚೆ ಬದಿ ಮುಚ್ಚಿದೆ. ಒಳ ಹೋದವಳಿಗೆ ದಿಗ್ಬಂಧ ಮಾಡಿದಂತೆ.

ತೀರ ಇತ್ತೀಚೆಗಷ್ಟೇ ಗೆಳತಿಯೊಬ್ಬಳು ಸ್ತ್ರೀ ಪ್ರಪಂಚದ ಕುರಿತು ಅಧ್ಯಯನ ಅಧ್ಯಾಪನ ಮಾಡಿದವಳು. ಸಖತ್ ಆತ್ಮವಿಶ್ವಾಸದವಳು ತನು ಪಯಣಿಸುತ್ತಿದ್ದ ಬಸ್ಸು ಹಳ್ಳಿ ಹಾದಿಯಲ್ಲಿ ಕೆಟ್ಟು ಹೋಗಿ ರಾತ್ರಿಯಿಡೀ ರಸ್ತೆಬದಿಯಲ್ಲಿ ಗಂಟೆಗಳ ಕಾಲ ಮೊಬೈಲಿಗೆ ಸಿಗ್ನಲ್ ಕೂಡ ಸಿಗದೆ ಅನಿವಾರ್ಯವಾಗಿ ಸುಮ್ಮನೆ ನಿಲ್ಲಬೇಕಾಗಿ ಬಂದ ಕತೆ ಹೇಳುತ್ತ ಆಗ ತನಗಾದ ಭಯದ ಅನುಭವವನ್ನು ವಿವರಿಸಿದಳು. ಕೊನೆಗೆ 'ಕೆಲಭಯಗಳು ಮನುಷ್ಯರೆಲ್ಲರಲ್ಲೂ ಇರುವುದೇ. ಆದರೆ ಕೆಲವುಂಟಲ್ಲ. ಅದು ನಮಗೆ, ಹೆಣ್ಣು ಮಕ್ಕಳಿಗೆ ಮಾತ್ರವೇ ಎಂಬಂತೆ ಆ ಕ್ಷಣಕ್ಕೆ ಉದ್ಭವವಾಗುತ್ತವೆ. ಸಮಾಜದ ವ್ಯವಸ್ಥೆಯೊಂದಿಗೆ ವಿಕೃತ ಮಾತ್ರವಲ್ಲ. ಸಾತ್ವಿಕ ಮನಸ್ಸುಗಳೂ ಹುಟ್ಟು ಹಾಕಿದ 'ಕೇಸ್ ಹಿಸ್ಟರಿ'ಗಳೂ ಐನ್ ಟೈಮಿನಲ್ಲಿ ಹೇಗೆ ಎದ್ದು 'ಭಯೋತ್ಪಾದನೆ; ಮಾಡುತ್ತವೆ ಅಂತ ನನಗರ್ಥವಾಗಿದ್ದು ಆಗಲೇ. ಎಂಥ ಸೋಜಿಗ ನೋಡು, ಇರುಳಲ್ಲಿ ಕರೆಂಟ್ ಹೋಯಿತೆಂದರೆ ನಾವು ಹೆಂಗಸರು ಮನೆಯಲ್ಲಿ ಒಬ್ಬರೇ ಇದ್ದೇವೆಂದರೆ ಪರಾವರ್ತನ ಪ್ರತಿಕ್ರಿಯೆಯಂತೆ ಮೊದಲು ಮಾಡುವ ಕೆಲಸ ಮುಂದಿನ ಮತ್ತು ಹಿಂದಿನ ಬಾಗಿಲು ಹಾಕಿದೆಯೇ ಅಂತ ನೋಡುವುದು, ಹಾಕಿಲ್ಲವಾದರೆ ತತ್‌ಕ್ಷಣ ಹಾಕಿದೆಯೇ ಅಂತ ನೋಡುವುದು, ಹಾಕಿಲ್ಲವಾದರೆ ತತ್‌ಕ್ಷಣ ಹಾಕುವುದು. ಪ್ರತಿಸಲವೂ ಯಾರೋ ದುಷ್ಟರು ಒಳನುಗ್ಗಿಯಾರೆಂಬುದೇ ಕಾರಣ ವಾಗಿರುವುದಿಲ್ಲ. ನಮ್ಮೊಳಗೇ ಹೆಣೆದುಕೊಂಡ ಅಭದ್ರತೆಯ ಒಂದು ಸ್ವರೂಪವೂ ಹೌದು ಅದು. ಎಲ್ಲಿಯವರೆಗೆ ಈ ಅಭದ್ರತೆಯ ಭೂತ ಕತ್ತಲುಗಳಲ್ಲಿ ನಿರ್ಜನ ರಸ್ತೆಗಳಲ್ಲಿ ಕಾಡುತ್ತಿರುವುದೋ ಅಲ್ಲಿಯವರೆಗೆ ಯಾವ ದೇಶ ಏನು ಸಾಧಿಸಿದರೂ ಫಲವೇನು ? ಹೆಸರಿಸಲಾಗದ ಆ ಭಯ ಮನೆಯಲ್ಲಿ ಇತರರೂ ಇದ್ದಾರೆಂದರೆ ಎಲ್ಲಿ ಮಾಯ ವಾಗುತ್ತದೆ?'

'ಹೆಣ್ಣು ಇಂದು ವೈದ್ಯೆ, ವಿಜ್ಞಾನಿ, ತಂತ್ರಜ್ಞಾನಿ, ಬಾಹ್ಯಾಕಾಶ ಯಾನಿ, ಮುಖ್ಯಮಂತ್ರಿ, ಪ್ರಧಾನಮಂತ್ರಿ, ಏನೆಲ್ಲ ಅತ್ಯಂತ ಕನಿಷ್ಠ ಕೆಲಸಕ್ಕೂ ಸರಿಯೆ ಆಕೆ. ಗರಿಷ್ಠ ಹುದ್ದೆಗೂ ಸರಿಯೆ ಎಂದು ಸೈಸೈ ಅನಿಸಿಕೊಂಡವಳು' ಅಂತೆಲ್ಲ ಮನೆಯಲ್ಲಿ ಶಾಲೆಯಲ್ಲಿ ಚರ್ಚಾಕೂಟದಲ್ಲಿ ಭಾಷಣದಲ್ಲಿ ಉದಾಹರಣೆ ಸಮೇತ ಮೇಜು ಕುಟ್ಟಿ ಹೇಳುತ್ತಿದ್ದಂತೆ, ಪ್ರತಿದಿನದ ಛಿಲ್ಲೆನಿಸುವ ಸುದ್ದಿಗಳು, ಹಸುಬಾಲೆ ಮಗು, ವೃದ್ಧೆ, ತರುಣಿ, ನಡುವಯಸ್ಸು– ಅತ್ಯಾಚಾರ, ವಿಚಾರಣೆ, ಅಪರಾಧಿಯ ಬಿಡುಗಡೆ. ಅವಳು ಯಾಕೆ ಅಲ್ಲಿ ಹೋಗ ಬೇಕಿತ್ತು? ಅಷ್ಟು ಸಿಂಗರಿಸಿ ಕಾರು ಯಾಕೆ ಹತ್ತಬೇಕಿತ್ತು? ಯಾಕೆ ರಾತ್ರಿಯ ಬಸ್ಸು ಹಿಡಿಯಬೇಕಿತ್ತು? ಕೆರಳಿಸುವ ವೇಷಭೂಷಣ ಯಾಕೆ ಬೇಕಿತ್ತು? ಹೆಣ್ಣುಮಕ್ಕಳು ತುಸು ಹಿಂದಿದ್ದರೇನೇ ಕ್ಷೇಮ. ಬಾಯಿ ಇದೆಯೆಂದು ಅಷ್ಟೆಲ್ಲ ಕಾನೂನು ಮಾಡುವುದೆ? ಯಾಕೆ ಬೇಕಿತ್ತು ಅವಳಿಗೆ? ಅವಳೇ ತಂದುಕೊಂಡ ದುರಂತ ಇದು. ಅನುಭವಿಸಲಿ... ಹೇಳುವವರು 'ವಿಚಾರಿಸಿಕೊಳ್ಳುವವ'ವರು ಮತ್ತೆ ಯಾರಲ್ಲ, ಗಂಡು ಮತ್ತು ಹೆಣ್ಣು 'ವೇಷ'ದಲ್ಲಿರುವವರು.

ಅತಂತ್ರದಿಂದ ನಮ್ಮನ್ನು ಕಾಪಾಡಿಕೊಳ್ಳುವ ಸಕಲಾತಿ ಸಕಲ ಮಾರ್ಗಗಳನ್ನೂ ತಂತ್ರಗಳನ್ನೂ ತಂತ್ರಜ್ಞಾನಗಳನ್ನೂ ಕುರಿತು ಆಳ ಚಿಂತಿಸುವ ಅಳವಡಿಸುವ ಕಾಲ ಇನ್ನು ಬೇರೆಯಿಲ್ಲ. ಇದುವೇ ಪ್ರಜಾಪ್ರಭುತ್ವದಲ್ಲಿ ರಾಜಪ್ರಭುತ್ವದಲ್ಲಿ ಎಂಬ ಯಾವ ಭೇದವಿಲ್ಲದೆ, ಹುಟ್ಟಿನಿಂದಲೇ ಸ್ತ್ರೀಪುರುಷರು ಸಮಾನರು. ಸಮಾನರೆಂದರೇ ಸಮಾನರೇ. ಎರಡು ಮಾತೇ ಇಲ್ಲ. ನಾವೂ ಈ ಭೂಮಿಗಿಳಿದು ಬಂದ ಜೀವಿಗಳೇ ಎಂದ ಮೇಲೆ ಜಗತ್ತು ಕೇವಲ ಪುರುಷರದು ಮಾತ್ರ ಹೇಗೆ? ನಮ್ಮದೂ ಹೌದಷ್ಟೆ? ನಾವು ಎರಡನೆಯ ದರ್ಜೆ ಹೇಗೆ? ರಾತ್ರಿ ಮತ್ತು ಹಗಲುಗಳು ಪುರುಷರಿಗೆ ಮಾತ್ರ ಮೀಸಲೋ? ಯಾರು ಹೇಳಿದರು? ಹಾಗೆ ಹೇಳಲಾದರೂ ಅವರು ಯಾರು?

ಒಟ್ಟಿನಲ್ಲಿ ಮನೆ ಮತ್ತು ಶಾಲೆಯ ನಡುವಿನ ಕಾಡು ದಾರಿ, ಕತ್ತಲದಾರಿ, ಹಗಲುಹೊತ್ತಿನ ನಿರ್ಜನದಾರಿ, ಒಂಟಿ ಓಡಾಟದ ದಾರಿ, ಒಂಟಿ ಜೀವನದ ಹಾದಿ. ಎಲ್ಲವೂ ಒಂದಿಷ್ಟೂ ಬದಲಾಗದೆ ಇಂದಿಗೂ ಮಹಿಳೆಯ ಸತತ ಭಯದ ದಾರಿಗಳೇ ಆಗಿವೆ. ಮೂರ್ತ ದೇಹದ ಮೂಲಕ ಅಮೂರ್ತ ಮನಸ್ಸಿನ ಮೇಲೆ ಮಾಡುವ ಆಕ್ರಮಣಗಳು. ಕುರುತಾಗಿ ಅವಳ ಚೇತನವನ್ನೇ ಸುಡುವ ದಿನನಿತ್ಯದ ದಾರುಣಸುದ್ದಿಗಳಾಗಿ ಪತ್ರಿಕೆಗಳಲ್ಲಿ ಪ್ರತ್ಯೇಕವಾಗಿ ಸೇರಿ

ಹೋಗುತ್ತವೆ. ಕಾನೂನುಗಳು ಎಷ್ಟೇ ಸುಧಾರಿಸಿದಂತೆ, ಮಹಿಳಾಪರವಾಗಿರುವಂತೆ ಕಂಡರೂ ಅದು ಕಾಣುವುದು ಮಾತ್ರ ಇನ್ನು ಅವುಗಳ ನಿರ್ವಚನಗಳೋ; ಎಷ್ಟೋ ಬಾರಿ ಎತ್ತಿದವರ ಕೈಗೂಸುಗಳು. ಹೇಗೆ ಅಂದರೆ ಹಾಗೆ ತಿರುಗುವ ತಿರುಗುಕುರ್ಚಿಗಳು. ಬುಗುರಿಯಂತೆ ತಿರುಗುಣದ ನುಡಿ ಗಟ್ಟುಗಳು. ಅವು ಅಡಗಿರುವುದೆ ಶಬ್ದಗಳೆಂಬೊ ಕೋಶದಲ್ಲಿ ಅವನ್ನು ಹೇಗೆ ಬೇಕಾದರೂ ತಿರುಚುವ ವಿದ್ಯೆಯೂ ಅವುಗಳ ಜೊತೆಗೆ ಹೊಳೆಯುತ್ತದಷ್ಟೇ? ಹೇಳಿಕೇಳಿ ಶಬ್ದ ಕೋಶಕ್ಕೆ ಯಾವತ್ತೂ ಒಂದೇ ಬಾಗಿಲಲ್ಲ. ತೆರೆವ ಚಾಲಾಕು ಬಲ್ಲವರ ಮುಷ್ಟಿಗೆ ಅದು ಸಿಕ್ಕಿತೆಂದರೆ ಇಲ್ಲಿ ತೆರೆದರೆ ಈ ಅರ್ಥ ಅಲ್ಲಿ ತೆರೆದರೆ ಆ ಅರ್ಥವೆಂಬ ಬಹ್ವರ್ಥಗಳ ಭಂಡಾರವದು. ಹೀಗಾಗಿ ತ್ರಸ್ತ ಮಹಿಳಾ ಬದುಕು ನರಳು ತ್ತಲೇ ಇರುತ್ತದೆ. ಉತ್ತರಿಸಿದಷ್ಟೂ ಮತ್ತೆ ಅವೇ ಪ್ರಶ್ನೆಗಳು, ಅವೇ ತನಿಖೆಗಳು ಅಂತ್ಯದಲ್ಲಿ ತಾನೇ ಅಪರಾಧಿಯೋ ಹೇಗೆ? ಎಂದು ಆಕೆಗನಿಸಬೇಕು, ತನಿಖಾಕ್ರಮಕ್ಕೆ ಹೆದರಿ ಅವಳ ಬಾಯಿ ಮಾತು ಕಳೆಯಬೇಕು ಹಾಗೆ... ಯಾರಿಂದ ಏನಾಯಿತು? ಬಲಾತ್ಕಾರವೆ? ಹೇಗಾಯಿತು? ಮತ್ತೆ? ಇನ್ನೂ ವಿವರ ಹೇಳಮ್ಮ- ಮಹಿಳೆಗಾಗಿ ಮಹಿಳೆಯರಿಂದ ಕಾನೂನು ರಚನೆಯ ಆಶಯ ಚಿಗುರೊಡೆಯುವುದು ಇಂಥ ಕಾರಣಗಳಿಂದಲೇ. ಇನ್ನು ಪ್ರಕರಣಗಳನ್ನು ಕೇಳಿ ತಮ್ಮದೇ ತೀರ್ಮಾನ ಹೇಳುವವರು ಸೃಷ್ಟಿಸುವ ಸಾಮಾಜಿಕ, ವಾಚಿಕ ಹಿಂಸೆಯ ಹಾಗೂ ಆಕ್ರಮಣದ ಪುಟಗಳೋ! ಆಧುನಿಕತೆಯ ವ್ಯಾಖ್ಯಾನದ ಕರಾಳ ಮಗ್ಗುಲುಗಳಿವು.

ಆಧುನಿಕ ಎನ್ನಲೇಕೆ?

ಕಾಲವೆಂಬುದು ಅಂದಿಂದಲೂ ನಡೆದು ಬಂದ ದಾರಿಯೇ ಹೀಗಿದೆ. ಆದಿಯಲ್ಲೇ ಅದರ ಶುರುವಾತು ಆಗಿಬಿಟ್ಟಿದೆ. ಶೂರ್ಪನಖಿಯ ಮೂಗಿನ ಕತೆ ಕೇಳುವಾಗೆಲ್ಲ ಅನಿಸುವುದು- ಸರಿಯಾಯಿತು. ಆಕೆಗೆ ತಕ್ಕ ಶಾಸ್ತಿ ಯಾಯಿತು ಅಂತಲೇ. ಕತ್ತರಿಸಿದ ಮೊಂಡು ಮೂಗಿನ ಅವಳ ರಾಕ್ಷಸೀರೂಪ ಕಂಡಂತೆಲ್ಲ ನಮಗೆ ಏನು ನಗೆ, ನಗೆಯೋ ನಗೆ. ಎಲ್ಲಿಂದ ಬಂತು ಆ ನಗೆ? ಹೇಗೆ ? ಕ್ರೌರ್ಯ ನಮಗೇ ತಿಳಿಯದ ಹಾಗೆ 'ನಮ್ಮೊಳಗೇ ಬಾಲ್ಯ ದಿಂದಲೇ ಎಂತು ಇದ್ದು ಬಿಡುತ್ತದೆ! ನಿರೂಪಣೆಯ ಕ್ರಮ ದಲ್ಲಿಯೇ ಒಳನುಗ್ಗಿ; ಎಂದಾದರೊಂದು ದಿನ 'ಅದೃಷ್ಟ ವಶಾತ್' ಎಚ್ಚರಾಗಿ ನಾವಾಗಿ ಕಿತ್ತು ಬಿಸುಡುವವರೆಗೂ ಬೆಚ್ಚಗೆ, ಕ್ರೌರ್ಯವೆಂದೇ ಅನಿಸದಂತೆ! ಯುಗಯುಗ ಗಳಿಂದಲೂ ಸಾಗಿ ಬಂದ ಕಥೆ, ಕಥಾನಕ, ಕಥಾಪ್ರಸಂಗ, ಇತಿಹಾಸಗಳು ಒಮ್ಮೆ ಹಾದುಬಂದರೂ ಸಾಕು, ಹೆಣ್ಣಿನ ಮನಸ್ಸನ್ನು ಇರಿದು, ಘಾಸಿಗೊಳಿಸಿ ಅಧೀನಗೊಳಿಸುವ ಉಪಕರಣಗಳಾಗಿ ಅವಳ ರೂಪ ಕೇಶ ಉಡುಗೆ ಚರಿತ್ರ ಶೀಲಗಳು ಧರ್ಮಾರ್ಥ ಒದಗಿಬಿಟ್ಟಿರುವುದು ಢಾಳಾಗಿ ಎದ್ದು ರಾಚುತ್ತದೆ. ಹೆಣ್ಣಿನ ಮೇಲೆ 'ಭುಜಬಲದ ಪರಾಕ್ರಮ'ದ ಹೇಡಿತನವನ್ನಷ್ಟೇ ಅಲ್ಲ. ತಮ್ಮ ಬುದ್ಧಿ-ಕೇಡಿತನವನ್ನೂ ಮೆರೆವ ಮೃಗೀಯ ಗಂಡುಗಳಿಂದಾಗಿ ಉದ್ದಕ್ಕೂ ಅವಮಾನ ಅನುಭವಿಸಿದ ಪುರುಷರು ತಲತಗ್ಗಿಸಿದ್ದಾರೆ. ಆದರೆ ಅವರು ತಲೆತಗ್ಗಿಸಿ ಕುಳಿತರಷ್ಟೇ ಸಾಕೆ?

ಯುಗಧರ್ಮಗಳೇ ಹಾಗೆ ಎನ್ನುತ್ತಾರೆ. ಧರೆಯನ್ನೇ ಹೊತ್ತಿಸಿ ಆ ಉರಿಯಲ್ಲಿ ಮೈಕಾಯಿಸುವಂಥವು. ಧರೆ ಹೊತ್ತಿ ಉರಿದರೆ ಉರಿಸಿದವರೂ ಉರಿದುಹೋಗುತ್ತಾರೆ ಎಂಬುದು ಮತ್ತೆ ಮತ್ತೆ ದೃಢವಾದರೂ ಅದು ವಿಸ್ಮರಣೆಗೆ ಸಂದು ಮತ್ತೆ ಮತ್ತೆ ಹೊಸವೇಷ ಪರಿಕರದಲ್ಲಿ ಮರುಕಳಿಸುವ ಕ್ರಮ. 'ನಡೆದು ಬಂದ ದಾರಿಯನ್ನು ತಿರುಗಿನೋಡಬೇಡ' ವೆಂದರೂ ನಿತ್ಯ ಏಳುವ ಪ್ರಸಂಗಗಳು ಆ ದಾರಿ ಮಸಳಿಸದ ಹಾಗೆ ಸ್ಮೃತಿಪಟಲದಲ್ಲಿ ತಿರುತಿರುಗಿ ಅಚ್ಚೊತ್ತುತ್ತಲೇ ಇರುತ್ತವೆ.

ಹೊಸವರ್ಷದಲ್ಲಾದರೂ ನಾಗರಿಕ ಪ್ರಪಂಚದಲ್ಲಿ ಬದುಕಲು ಖಂಡಿತವಾಗಿಯೂ ಅನರ್ಹರಾದ ಅತ್ಯಾಚಾರಿ ಗಳು ಸಶ್ರಮ ಶಿಕ್ಷೆ ಅನುಭವಿಸುತ್ತ ಎಲ್ಲಿರಬೇಕೋ ಅಲ್ಲಿರಲಿ. ಪಶ್ಚಾತ್ತಾಪದಲಿ ಬೆಂದು ಬಡವಾಗಿ ಕರಗಲಿ ಮತ್ತು ಲೋಕದಲಿ ಹೆಣ್ಣುಸೂಕ್ಷ್ಮದ ಗಂಡುಗಳ ಸಂಖ್ಯೆ ಹೆಚ್ಚಲಿ.

*ಮುಂಬರುವ ವರ್ಷದಲಿ ಗಂಡುಹುಡುಗರಲಿ*
*ಹೆಂಗರುಳ ಸಂವೇದ ಹೆಚ್ಚಲಿ.*
*ಹೆಂಗರುಳ ಸಂವೇದ ಹೆಚ್ಚಿಕೊಳ್ಳಲಿ ಅವರು*
*'ಬುದ್ಧಿಯಲಿ ತನು ಮನವ ತಿದ್ದಿಕೊಳಲಿ'*
*ಬುದ್ಧಿಯಲಿ ತನುಮನವ ತಿದ್ದಿಕೊಳ್ಳುತ ಲೋಕ*
*ಸುಮ್ಮಾನದಲಿ ಬದುಕ ಕಲಿಯಲಿ.*
*ನೊಂದವರ ಹಾರೈಕೆ ಹುಸಿಯಾಗದಿರಲಿ*
*ನಿಜದಲ್ಲಿ ನಿಜ ಫಲಿಸಲಿ.*







## ಶ್ರೀಮಠದಲ್ಲಿ ನಡೆದ
## ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ 58ನೇ ಮಹಾಧಿವೇಶನ

-ಎಚ್.ಎಸ್. ಸಿದ್ಧಗಂಗಪ್ಪ




ತವರು ಮನೆಯಲ್ಲಿ ನಡೆಯುವ ವಿಶೇಷ ಹಬ್ಬಗಳಿಗೆ ಹೆಣ್ಣುಮಕ್ಕಳು ಸಂತೋಷ, ಸಂಭ್ರಮದಿಂದ ಭಾಗವಹಿಸು ವಂತೆ, ಶ್ರೀಮಠದಲ್ಲಿ ನಡೆಯುವ ಪರಮಪೂಜ್ಯ ಶ್ರೀ ಶ್ರೀ ಗಳವರ ಜನ್ಮದಿನೋತ್ಸವ, ಗುರುವಂದನೆ ಹಾಗೂ ಡಿಸೆಂಬರ್ ತಿಂಗಳಿನಲ್ಲಿ ನಡೆಯುವ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ವಾರ್ಷಿಕ ಅಧಿವೇಶನಕ್ಕೆ ಶ್ರೀಮಠದಲ್ಲಿ ವ್ಯಾಸಂಗ ಮಾಡಿ ಪರಮಪೂಜ್ಯ ಶ್ರೀಗಳವರ ಮಾರ್ಗ ದರ್ಶನದ ಮುಂಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿ ಕೊಂಡು ಸುಸಂಸ್ಕೃತರಾಗಿ ನಾಡಿನ, ದೇಶದ ಹಾಗೂ ವಿಶ್ವದ ವಿವಿಧ ದೇಶಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವ ಹಳೆಯ ವಿದ್ಯಾರ್ಥಿಗಳು ತಪ್ಪದೇ ಭಾಗವಹಿಸಿ ಪೂಜ್ಯ ಶ್ರೀಗಳವರ ದರ್ಶನ ಮಾಡಿ ಧನ್ಯತೆಯನ್ನು ಪಡೆಯುತ್ತಿರುವುದು ಅವರ ಜೀವನ ಅಮೃತದ ಕ್ಷಣಗಳು.

ಡಿಸೆಂಬರ್ ೨೩, ೨೦೧೨ರ ಭಾನುವಾರ ಗೋಸಲ ಸಿದ್ಧೇಶ್ವರ ವೇದಿಕೆಯಲ್ಲಿ ನಡೆದ ಸರ್ವ ಸದಸ್ಯರ ೫೮ನೇ ಮಹಾಧಿವೇಶನವನ್ನು ವೇದಿಕೆಯ ಮೇಲಿದ್ದ ಹರಗುರು ಚರಮೂರ್ತಿಗಳು ಹಾಗೂ ಗಣ್ಯರ ಉಪಸ್ಥಿತಿಯಲ್ಲಿ ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಕಾರ್ಯಕ್ರಮವನ್ನು ಚಾಲನೆ ನೀಡಿ ಆಶೀರ್ವದಿಸಿದರು. ಶ್ರೀ ಪಿ.ಎಸ್. ಸಿದ್ಧಗಂಗಯ್ಯನವರ ಪ್ರಾರ್ಥನೆಯೊಂದಿಗೆ ಸಭೆ ಪ್ರಾರಂಭವಾಯಿತು. ಸಂಘದ ಪ್ರಧಾನ ಕಾರ್ಯದರ್ಶಿ ಡಾ॥ ಎಂ.ಎನ್. ಚನ್ನಬಸಪ್ಪನವರು ಪ್ರಾಸ್ತಾವಿಕ ನುಡಿಗಳನ್ನಾಡಿ ಎಲ್ಲರನ್ನೂ ಸ್ವಾಗತಿಸಿದರು. ಕಳೆದ ಮಹಾಧಿವೇಶನದಿಂದ ನಿಧನರಾದ ಸಂಘದ ಸದಸ್ಯರಿಗೆ ಮೌನವನ್ನಾಚರಿಸಿ ಶ್ರದ್ಧಾಂಜಲಿ ಸಲ್ಲಿಸಲಾಯಿತು. ಸಂಘದ ಸಂಕ್ಷಿಪ್ತ ವರದಿಯನ್ನು ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸಭೆಯ ಮುಂದಿಟ್ಟರು.

೫೮ನೇ ಮಹಾಧಿವೇಶನದ ವಿಶೇಷತೆಯೆಂದರೆ ವಿವಿಧ ಲೇಖಕರು ಬರೆದ ಕೃತಿಗಳನ್ನು ಪರಮಪೂಜ್ಯ ಶ್ರೀ ಶ್ರೀಗಳವರ ಶಿವಹಸ್ತದಿಂದ ಲೋಕಾರ್ಪಣೆ ಮಾಡಿಸಿದುದು. ಇದೊಂದು ಅರ್ಥಪೂರ್ಣವಾದ ಕಾರ್ಯಕ್ರಮ. ಡಾ॥ ಪ್ರದೀಪ್‌ಕುಮಾರ್ ಹೆಬ್ರಿಯವರು ಬರೆದ 'ಯುಗಾವತಾರಿ ಬಸವಣ್ಣ', ಶ್ರೀ ಬಸವ ದರ್ಶನ ಮಹಾಕಾವ್ಯದ ಆರು ಸಂಪುಟಗಳನ್ನು, ಸಿದ್ಧಗಂಗಾ ಮಾಸಪತ್ರಿಕೆಯ ಸಹ

ಸಂಪಾದಕರು, ಬಸವ ಸಮಿತಿ ಸಂಶೋಧನಾ ಹಾಗೂ ಪ್ರಕಟಣಾ ವಿಭಾಗದ ನಿರ್ದೇಶಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಸಂಪಾದಿಸಿದ ಶ್ರೀ ಬಿ.ಕೆ. ಲಿಂಗಯ್ಯ ನವರ ಅಭಿನಂದನಾ ಕೃತಿ 'ಎಲೆಮರೆಯ ಮಲ್ಲಿಗೆ', ಡಾ॥ ಸಿ.ಬಿ. ಚಿಲಕರಾಗಿಯವರು ಬರೆದ 'ನೂರೆಂಟು ನಾಯಿ ಬೊಗಳಿದರೇನು' (ಒಡಿಕೆಪ್ಪ ತಾತನವರ ತತ್ವಪದ ಸಂಗ್ರಹ, ಜೀವನ ಚರಿತ್ರೆ) ಶ್ರೀ ಹೂಜೇನಹಳ್ಳಿ ಗುಜ್ಜಯ್ಯ ನವರು ಬರೆದ 'ಜ್ಞಾನಜ್ಯೋತಿ' ಕವನ ಸಂಕಲನ ಈ ಸಂದರ್ಭದಲ್ಲಿ ಲೋಕಾರ್ಪಣೆಯಾದವು. ಯುಗಾವತಾರಿ ಬಸವಣ್ಣ ಕೃತಿಯನ್ನು ಶ್ರೀ ಎಂ.ಜಿ. ಸಿದ್ಧರಾಮಯ್ಯ ಪರಿಚಯ ಮಾಡಿ ಕೊಟ್ಟರೆ, 'ಎಲೆಮರೆಯ ಮಲ್ಲಿಗೆ' ಅಭಿನಂದನಾ ಕೃತಿಯನ್ನು ಶ್ರೀ ಬಿ.ಕೆ. ಲಿಂಗಯ್ಯನವರ ಅಭಿನಂದನಾ ಸಮಿತಿಯ ಅಧ್ಯಕ್ಷರೂ, ತುಮಕೂರು ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ ಗಳಾದ ಶ್ರೀ ಗೋವಿಂದ ರಾಜುರವರು ಪರಿಚಯ ಮಾಡಿ ಕೊಟ್ಟು ಶ್ರೀ ಬಿ.ಕೆ. ಲಿಂಗಯ್ಯ ನವರು ಶ್ರೀಮಠಕ್ಕೆ ಸಲ್ಲಿಸಿದ ಅನನ್ಯ ಸೇವೆಯನ್ನು ಕೃತಜ್ಞತೆ ಯಿಂದ ಸ್ಮರಿಸಿ ಅವರಿಂದ ಅನೇಕ ಬಡ ವಿದ್ಯಾರ್ಥಿಗಳ ಭವಿಷ್ಯ ರೂಪುಗೊಳ್ಳಲು ಸಾಧ್ಯವಾಯಿತು ಎಂದು ನುಡಿದರು. ಪರಮಪೂಜ್ಯ ಶ್ರೀಗಳವರು ಶ್ರೀ ಬಿ.ಕೆ.ಎಲ್. ಅವರ ಬಗ್ಗೆ ಅಪಾರವಾದ ನಂಬಿಕೆ, ಪ್ರೀತಿಯನ್ನಿಟ್ಟುಕೊಂಡಿದ್ದರು ಎಂದು ಈ ಸಂದರ್ಭದಲ್ಲಿ ನೆನಪು ಮಾಡಿಕೊಟ್ಟರು.

ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ನಿವೃತ್ತ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಎಲ್. ರೇವಣ ಸಿದ್ಧಯ್ಯನವರು ಮಾತನಾಡಿ ಶ್ರೀ ಬಿ.ಕೆ.ಎಲ್. ರವರಿಂದ ಮಾನವೀಯ ಮೌಲ್ಯಗಳನ್ನು ಕಲಿತಿದ್ದು ಎಂದು ಹೇಳುವುದರ ಮೂಲಕ ನುಡಿನಮನ ಸಲ್ಲಿಸಿದರು.

ಇದೇ ಸಂದರ್ಭದಲ್ಲಿ ಕೃತಿಗಳ ಲೇಖಕರಿಗೆ ಸನ್ಮಾನಿಸಿ ಆಶೀರ್ವದಿಸಿದರು. ಶ್ರೀ ಬಿ.ಕೆ.ಎಲ್. ಅಭಿನಂದನಾ ಸಮಿತಿಯ ಪರವಾಗಿ ಶ್ರೀ ಗೋವಿಂದರಾಜು ಮತ್ತು ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಪರಮಪೂಜ್ಯ ಶ್ರೀಗಳವರಿಗೆ ಶಾಲು ಹೊದಿಸಿ ಫಲ ತಾಂಬೂಲ ನೀಡಿ ಭಕ್ತಿಸಮರ್ಪಣೆ ಮಾಡಿದರು.

ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ೨೦೧೧–೧೨ನೇ ಸಾಲಿನ ಲೆಕ್ಕಪತ್ರಗಳ ಪರಿಶೋಧನೆ, ೨೦೧೨–೧೩ನೇ ಸಾಲಿನ ಆಯವ್ಯಯ ಪತ್ರವನ್ನು ಕಾರ್ಯದರ್ಶಿ ಪ್ರೊ. ಬಿ. ಗಂಗಾಧರಯ್ಯನವರು, ಸಿದ್ಧಗಂಗಾ ಮಾಸಪತ್ರಿಕೆಯ ಆಯವ್ಯಯ ಪತ್ರವನ್ನು ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯನವರು, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ವರದಿಯನ್ನು ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಮಂಡಿಸಿ ಸಭೆಯ ಅನುಮೋದನೆ ಪಡೆದರು.

ಕಳೆದ ಎರಡು ವರ್ಷಗಳಿಂದ ಕೊಡಮಾಡುತ್ತಿರುವ **'ಸಿದ್ಧಗಂಗಾಶಿವಕುಮಾರಶ್ರೀ'** ಪ್ರಶಸ್ತಿಯನ್ನು ಈ ಸಲ **ನಾಡೋಜ ಪ್ರೊ.ಕೆ.ಜಿ. ನಾಗರಾಜಪ್ಪನವರಿಗೆ** ಹಾಗೂ ಹೃದಯ ತಜ್ಞರಾದ **ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ** ಅವರಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು. ಪರಮಪೂಜ್ಯ ಶ್ರೀಗಳವರು ಶಾಲು ಹೊದಿಸಿ, ಸ್ಮರಣಿಕೆ, ಅಭಿನಂದನಾ ಪತ್ರ ನೀಡಿ ಗೌರವಿಸಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ **'ಸಿದ್ಧಗಂಗಾ ಶಿವಕುಮಾರಶ್ರೀ'** ಪ್ರಶಸ್ತಿ ಪ್ರಾಯೋಜಕರಾದ ಶ್ರೀಮತಿ ಶಕುಂತಲಾ ಜಯದೇವ್ ಅವರನ್ನು ಗೌರವಿಸ





ಪರಮಪೂಜ್ಯ ಶ್ರೀ ಶ್ರೀ ಗಳವರಿಂದ ಶ್ರೀ ನಾಡೋಜ ಕೆ.ಜಿ. ನಾಗರಾಜಪ್ಪ ಅವರಿಗೆ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ

ಪರಮಪೂಜ್ಯ ಶ್ರೀ ಶ್ರೀ ಗಳವರಿಂದ ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ ಅವರಿಗೆ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ

ಪರಮಪೂಜ್ಯ ಶ್ರೀ ಶ್ರೀ ಗಳವರಿಂದ ಶ್ರೀಮತಿ ಶಕುಂತಲಾ ಜಯದೇವ್ ಅವರಿಗೆ ಸನ್ಮಾನ

ಲಾಯಿತು. ಪ್ರೊ. ಕೆ.ಜಿ. ನಾಗರಾಜಪ್ಪನವರ ಪರಿಚಯವನ್ನು ಪ್ರೊ. ಹೆಚ್.ವಿ. ವೀರಭದ್ರಯ್ಯನವರು, ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿಯವರ ಪರಿಚಯವನ್ನು ಶ್ರೀ ಬಿ.ಎಂ. ಪರಮೇಶ್ವರಪ್ಪನವರು ಮಾಡಿಕೊಟ್ಟರು.

ಪ್ರೊ. ಕೆ.ಜಿ. ನಾಗರಾಜಪ್ಪನವರು ತಮ್ಮ ಕೃತಜ್ಞತಾ ನುಡಿಗಳಲ್ಲಿ ತಾವು ಬೆಳೆದ ಪರಿಸರ, ಶ್ರೀಮಠ ಆಶ್ರಯ ನೀಡಿದುದನ್ನು ಸ್ಮರಿಸಿ ಶ್ರೀ ಸಿದ್ಧಗಂಗಾ ಮಠ ಬೇರೆ ಮಠ ಗಳಿಗಿಂತ ಭಿನ್ನವಾಗಿದೆ. ಪೂಜ್ಯ ಶ್ರೀಗಳವರು ಪಂಚಶಕ್ತಿ ಯಿಂದ ಮಠವನ್ನು ಅಭಿವೃದ್ಧಿ ಪಥದಲ್ಲಿ ಮುನ್ನಡೆಸುತ್ತಿದ್ದಾರೆ ಜಾತಿ ಭೇದವಿಲ್ಲದೆ ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಬದುಕನ್ನು ರೂಪಿಸಿದ ಜ್ಯೋತಿ ಸ್ವರೂಪರಾಗಿದ್ದಾರೆ. ಇಲ್ಲಿ ಲಿಂಗತತ್ವಕ್ಕಿಂತ ಕಾರ್ಯತತ್ವಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಗುರು ಮತ್ತು ವಿರಕ್ತರ ಸಂಘರ್ಷವಿಲ್ಲ ಎಂದು ಹೇಳಿದ ಪ್ರೊ. ಕೆ.ಜಿ. ನಾಗರಾಜಪ್ಪ ನವರು ಪೂಜ್ಯ ಶ್ರೀಗಳವರು ಒಬ್ಬ ವ್ಯಕ್ತಿಯಲ್ಲ, ಶಕ್ತಿ, ಸಮಾಜ ಸಮೂಹವಾಗಿದ್ದಾರೆ ಶ್ರೀಮಠದಲ್ಲಿ ನಿಷ್ಠಾವಂತ ಕಾರ್ಯಪಡೆ ಬೇಕಾಗಿದೆ. ಅದೇ ನಾವು ಶ್ರೀಗಳವರಿಗೆ ಕೊಡುವ ಕಾಣಿಕೆ ಎಂದು ತಿಳಿಸಿದರು.

ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿ ಅವರು ಮಾತ ನಾಡಿ ಪರಮಪೂಜ್ಯ ಶ್ರೀಗಳವರ ಲಿಂಗಪೂಜಾನಿಷ್ಠೆ, ಮಠವನ್ನು ಬೆಳೆಸಲು ಸಾಧ್ಯವಾಯಿತು ಎಂದು ಹೇಳಿ ತಾವು ಬರೆದ ಕವನವನ್ನು ವಾಚನ ಮಾಡುವುದರ ಮೂಲಕ ನುಡಿನಮನಗಳನ್ನು ಸಲ್ಲಿಸಿದರು.

ದಿವ್ಯಸಾನ್ನಿಧ್ಯವನ್ನು ವಹಿಸಿದ್ದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ತಮ್ಮ ಶಿವ ನುಡಿಯಲ್ಲಿ ಇಲ್ಲಿ ನೀವೆಲ್ಲ ಭಾಗವಹಿಸಿದುದು ಸಂತೋಷ ವನ್ನುಂಟು ಮಾಡಿದೆ ನಾವು ಮಾಡಿದ ಕಿಂಚಿತ್ ಸೇವೆಯನ್ನು ದೊಡ್ಡದೆಂದು ಭಾವಿಸಿದ್ದೀರಿ ಎಂದು ತಿಳಿಸಿದ ಪೂಜ್ಯರು ಹಿಂದೆ ಮಠದಲ್ಲಿದ್ದ ಪರಿಸ್ಥಿತಿಯನ್ನು ನೆನಪಿಸಿಕೊಂಡರು. ಶ್ರೀಮಠ ಗುರುಪರಂಪರೆಯ ಆಶೀರ್ವಾದ, ಜಾತಿ ವರ್ಗ ಭೇದವಿಲ್ಲದೆ ಎಲ್ಲರೂ ನೀಡಿದ ಸಹಕಾರ, ಸಹಾಯದಿಂದ ಮಠ ಬೆಳೆಯಲು ಸಾಧ್ಯವಾಯಿತು ಎಂದು ಸ್ಮರಿಸಿದ ಪೂಜ್ಯರು ಹಳೆ



ಶ್ರೀ ಎಲ್. ವಿರೂಪಾಕ್ಷಯ್ಯನವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ



ಶ್ರೀ ಎಂ. ಮಲ್ಲವೀರಯ್ಯನವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ



ಶ್ರೀ ಬಿ.ಕೆ. ಲಿಂಗಯ್ಯನವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ



ಶ್ರೀ ಹೆಚ್.ಟಿ. ಲಿಂಗಪ್ಪನವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ

ತಪ್ಪುತ್ತಿರುವ ಸಮಾಜದ ಬಗ್ಗೆ ಆತಂಕ ವ್ಯಕ್ತಪಡಿಸಿದರು. ಮಾನವೀಯ ಮೌಲ್ಯಗಳು ಕುಸಿಯುತ್ತಿದ್ದು, ಕಾಲದ ಸದ್ಬಳಕೆ ಯಾಗುತ್ತಿಲ್ಲ ಭ್ರಷ್ಟಾಚಾರ ಎಲ್ಲ ಕ್ಷೇತ್ರಗಳಲ್ಲಿಯೂ ವ್ಯಾಪಿಸಿದೆ. ಇಂತಹ ವಿಷಮ ಪರಿಸ್ಥಿತಿ ಯಲ್ಲಿ ಭ್ರಷ್ಟಾಚಾರವನ್ನು ಬುಡಸಮೇತ ಕಿತ್ತುಹಾಕಬೇಕು ಎಂದು ತಿಳಿಸಿದ ಪೂಜ್ಯ ಶ್ರೀಗಳು ಇಂತಹ ಪರಿಸ್ಥಿತಿಯಲ್ಲಿ ಎಲ್ಲಿಯೂ ತಮ್ಮ ತಮ್ಮ ಕರ್ತವ್ಯಗಳನ್ನು ಶ್ರದ್ಧೆ, ನಿಷ್ಠೆಯಿಂದ ಮಾಡುವಂತಾಗಬೇಕು ಎಂದು ಸಂದೇಶ ನೀಡಿದರು.

ಶ್ರೀಮಠದ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ನುಡಿಸಂದೇಶದಲ್ಲಿ ಶ್ರೀಮಠ ಪರಮಪೂಜ್ಯ ಗುರುಗಳಿಂದ ಬೃಹದಾಕಾರವಾಗಿ ಬೆಳೆದಿದೆ. ಮಠ ಬೆಳೆದಂತೆ ಸಮಸ್ಯೆಗಳೂ ಬೆಳೆಯುತ್ತಿವೆ. ಇಂದು ನೀರಿನ ಸಮಸ್ಯೆ, ನೈರ್ಮಲ್ಯ ಸಮಸ್ಯೆಗಳು ಕಾಡುತ್ತಿವೆ. ಆ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸಲಾಗುತ್ತಿದೆ ಎಂದರು. ಇಂದಿನ ಅಧಿವೇಶನದಲ್ಲಿ ನೀವೆಲ್ಲ ಭಾಗವಹಿಸಿರು ವುದನ್ನು ಕಂಡು ಪರಮಪೂಜ್ಯರಿಗೆ ತುಂಬಾ ಸಂತೋಷ ವಾಗಿದೆ. ತಾಯಿಗೆ ಮಕ್ಕಳನ್ನು ನೋಡಿದಾಗ ಆಗುವ ಆನಂದದಷ್ಟೇ ಆಗಿದೆ ಎಂದು ಹೇಳಿದರು.

ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಕಳೆದ ಮೂರು ವರ್ಷಗಳಿಂದ ಶ್ರೀಮಠದಲ್ಲಿ ಅನುಪಮ ಸೇವೆ ಸಲ್ಲಿಸಿದವರನ್ನು ಗುರುತಿಸಿ **'ಸಂಘಸಿರಿ'** ಪ್ರಶಸ್ತಿಯನ್ನು ನೀಡಿ ಗೌರವಿಸುವಂತಹ ಶ್ಲಾಘನೀಯ ಕೆಲಸ ಮಾಡುತ್ತಿದೆ. ಈ ಅಧಿವೇಶನದಲ್ಲಿ ನಾಲ್ಕು ಜನ ಹಿರಿಯ ಚೇತನಗಳಾದ **ವಿದ್ವಾನ್ ಶ್ರೀ ಎಲ್. ವಿರೂಪಾಕ್ಷಯ್ಯ ವಿದ್ವಾನ್ ಶ್ರೀ ಎಂ. ಮಲ್ಲವೀರಯ್ಯ ವಿದ್ವಾನ್ ಶ್ರೀ ಬಿ.ಕೆ. ಲಿಂಗಯ್ಯ ಹಾಗೂ ವಿದ್ವಾನ್ ಶ್ರೀ ಹೆಚ್.ಟಿ. ಲಿಂಗಯ್ಯ** ಅವರನ್ನು ಪರಮಪೂಜ್ಯ ಶ್ರೀಗಳವರು ಶಾಲು ಹೊದಿಸಿ, ಫಲತಾಂಬೂಲ, ಅಭಿನಂದನಾ ಪತ್ರ ಹಾಗೂ ಸ್ಮರಣಿಕೆಯನ್ನು ನೀಡಿ ಸನ್ಮಾನಿಸಿ ಆಶೀರ್ವದಿಸಿದರು.

ಸನ್ಮಾನಿತರ ಪರಿಚಯವನ್ನು ಶ್ರೀ ಜಿ.ಹೆಚ್.ಗಂಗಾಧರಯ್ಯ, ಶ್ರೀ ಎಸ್. ಬಸವರಾಜಪ್ಪ, ಶ್ರೀ ಕೆ.ಬಿ. ಶಿವಶಂಕರ್ ಹಾಗೂ ಶ್ರೀ ಪಿ.ಎಸ್. ಸಿದ್ಧಗಂಗಯ್ಯ ಮಾಡಿಕೊಟ್ಟರು.

ಕೊನೆಯಲ್ಲಿ ವಿದ್ವಾನ್ ಶ್ರೀ ಪಿ.ಎನ್. ಚಂದ್ರಶೇಖರಯ್ಯ ನವರು ಶರಣು ಸಮರ್ಪಣೆ ಮಾಡಿದರು.







# ದಿನಾಂಕ 23-12-2012ರಂದು ಶ್ರೀಮಠದಲ್ಲಿ ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ 58ನೇ ಮಹಾಧಿವೇಶನದ ಪತ್ರಿಕಾ ವರದಿ

## ಸಿದ್ಧಗಂಗಾ ಶ್ರೀ ವ್ಯಕ್ತಿಯಲ್ಲ, ಶಕ್ತಿ

ಗುರು, ವಿರಕ್ತ ಸಂಘರ್ಷದ ಸುಳಿಯಲ್ಲಿ ಸಿಲುಕದೆ ಇತರ ಮಠಗಳಿಗಿಂತ ಸಮಾಜದಲ್ಲಿ ಸಿದ್ಧಗಂಗಾ ಮಠ ಭಿನ್ನವಾಗಿ ಗುರುತಿಸಿಕೊಂಡಿದೆ ಎಂದು ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪ ಅಭಿಪ್ರಾಯಪಟ್ಟರು.

ಸಿದ್ಧಗಂಗಾ ಮಠದ ಶ್ರೀ ಗೋಸಲಸಿದ್ಧೇಶ್ವರ ವೇದಿಕೆ ಯಲ್ಲಿ ನಡೆದ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ೫೮ನೇ ಮಹಾಧಿವೇಶನ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದರು.

ನಾಡಿನಲ್ಲಿ ಸಾವಿರಾರು ಮಠಗಳಿವೆ. ಸಾಕಷ್ಟು ಮಠಗಳು ಅಳಿಸಿ ಹೋಗಿವೆ. ಈ ಎಲ್ಲಾ ಮಠಗಳಿಗಿಂತ ಭಿನ್ನ, ವಿಶಿಷ್ಟ ಸಾಲಿನಲ್ಲಿ ಸಿದ್ಧಗಂಗಾಮಠ ನಿಲ್ಲುತ್ತದೆ. ಈ ಮೂಲ ಪ್ರಶ್ನೆಗೆ ಉತ್ತರ ಹುಡುಕುತ್ತಾ ಹೋದಾಗ ಕಂಡ ಸತ್ಯ, ಈ ಮಠವು ಗುರು, ವಿರಕ್ತ ಸಂಘರ್ಷಕ್ಕೆ ಸಿಲುಕದ ಮಠವೆಂಬುದು ಅರಿವಾಯಿತು ಎಂದರು.

ನಂದದ ಒಲೆ, ಬೆಟ್ಟದ ಮೇಲಿಗೆ ಗಂಗೆ, ಹಳೆಯ ಮಠ, ಯಂತ್ರಕಟ್ಟುವ ಮಂಚ ಹಾಗೂ ಉದ್ದಾನ ಶ್ರೀಗಳ ಪವಾಡ ಸಿದ್ಧಗಂಗೆಯಲ್ಲಿನ ಪಂಚಶಕ್ತಿಗಳು. ಮಠವು ಪಂಚ ಶಕ್ತಿ ಕೇಂದ್ರವಾಗಿರುವುದರಿಂದ ಗುರು, ವಿರಕ್ತ ಸಂಘರ್ಷಕ್ಕೆ ಇಲ್ಲಿ ಆಸ್ಪದವಾಗಿಲ್ಲ ಎಂದರು.

ಪಂಚಶಕ್ತಿಗಳ ಸಮ್ಮಿಲನ ಸಾಕಾರ ಜಾಗೃತಿ ಸ್ವರೂಪವೇ ಸಿದ್ಧಗಂಗಾ ಶ್ರೀಗಳು. ಶ್ರೀಗಳು ವ್ಯಕ್ತಿಯಲ್ಲ. ಶ್ರೀಗಳು ಸಮೂಹ. ಹಾಗಾಗಿ, ಶ್ರೀಗಳಿಗೆ ಸಮಾಜದೆಡೆಗೆ ಅಪಾರ ಕಳಕಳಿ ಮತ್ತು ಅವರಲ್ಲಿ ನೋವು ಕಾಣಬಹುದು. ಆ ಶಕ್ತಿ, ಸಮೂಹದ ಅನುಗುಣವಾಗಿ ನಿಷ್ಠಾವಂತ ಕಾರ್ಯ ಪಡೆ ಸಿದ್ಧಪಡಿಸಬೇಕೆಂಬ ಅದಮ್ಯ ಆಸೆ ಶ್ರೀಗಳದ್ದು. ಶ್ರೀಗಳ ಈ ಇಚ್ಛೆ ಅವರಿಗೆ ನೆಮ್ಮದಿ, ಸುಖ ತಂದುಕೊಡಲಿದೆ ಎಂದು ವಿಮರ್ಶಿಸಿದರು.

ಸತ್ಯ, ಶುದ್ಧ, ಕಾಯಕಕ್ಕೆ ಮತ್ತೊಂದು ಹೆಸರೇ ಸಿದ್ಧಗಂಗೆ, ೧೦೫ನೇ ವಯಸ್ಸಿನಲ್ಲೂ ಕಾಯಕನಿಷ್ಠೆ ಮೆರೆದವರು ಶ್ರೀಗಳು. ಜಾತಿ, ಧರ್ಮ ಮೀರಿ ಬೆಳೆದ ಮಠ ಇದಾಗಿದೆ ಎಂದು ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ ಪುರಸ್ಕೃತ ಮಕ್ಕಳ ಹೃದಯ ತಜ್ಞೆ ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ ಹೇಳಿದರು.

ಹೊಟ್ಟೆಗೆ ಅನ್ನವಿಲ್ಲ : ಹೊಟ್ಟೆಗೆ ಅನ್ನವಿಲ್ಲ, ಮೈತುಂಬ ಬಟ್ಟೆಯಿಲ್ಲ, ವಾಸ ಮಾಡುವುದಕ್ಕೆ ಸೂರಿಲ್ಲ. ಇಂತಹ ಸಮಾಜದಲ್ಲಿ ನಾವು ಬದುಕುತ್ತಿದ್ದೇವೆ ಎಂದು ಡಾ॥ ಶಿವ ಕುಮಾರಸ್ವಾಮೀಜಿ ಕಳವಳ ವ್ಯಕ್ತಪಡಿಸಿದರು.

ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಿತರನ್ನು ಮೇಲೆತ್ತಲು ಅಧಿಕಾರಿಗಳು, ಸರ್ಕಾರಿ ನೌಕರರು ನಿಷ್ಠಾ ಪೂರ್ವಕವಾಗಿ, ಶ್ರದ್ಧಾಪೂರ್ವಕವಾಗಿ ಅವರವರ ಕಾಯಕ ಮಾಡಬೇಕು ಎಂದು ಕರೆ ನೀಡಿದರು.

ಸಮಾಜದಲ್ಲಿ ಸಂಕುಚಿತ, ಜಾತಿ ಮನೋಭಾವನೆ ಹೆಚ್ಚುತ್ತಿದೆ. ಸ್ವಾರ್ಥಪರತೆ ತಾಂಡವವಾಡುತ್ತಿದೆ. ಪ್ರತಿ ಯೊಬ್ಬರೂ ಇದರಿಂದ ಹೊರಬಂದು ಉತ್ತಮ ಸಮಾಜ ನಿರ್ಮಾಣ ಕಾರ್ಯದಲ್ಲಿ ತೊಡಗಬಹುದು ಎಂದು ಹೇಳಿದರು.

**ಸಂಘಸಿರಿ ಪ್ರಶಸ್ತಿ:** ಎಲ್. ವಿರೂಪಾಕ್ಷಯ್ಯ, ಎಂ. ಮಲ್ಲ ವೀರಯ್ಯ, ಬಿ.ಕೆ. ಲಿಂಗಯ್ಯ, ಎಚ್.ಟಿ. ಲಿಂಗಪ್ಪ ಅವರಿಗೆ ಸಂಘಸಿರಿ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಸಿದ್ಧಗಂಗಾ ಮಠಾಧ್ಯಕ್ಷ ಸಿದ್ಧಲಿಂಗ ಸ್ವಾಮೀಜಿ, ಜಿ.ಪಂ. ಸಿಇಒ ಗೋವಿಂದರಾಜು, ನಿವೃತ್ತ ಪೊಲೀಸ್ ಮಹಾ ನಿರ್ದೇಶಕ ಎಲ್. ರೇವಣಸಿದ್ಧಯ್ಯ ಇದ್ದರು.

**ಕೃತಿ ಬಿಡುಗಡೆ :** ಡಾ॥ ಪ್ರದೀಪ್‌ಕುಮಾರ್ ಹೆಬ್ರಿ ವಿರಚಿತ ಯುಗಾವತಾರಿ, ಎಲೆಮರೆಕಾಯಿ ಸೇರಿದಂತೆ ನಾಲ್ಕು ಕೃತಿಗಳನ್ನು ಬಿಡುಗಡೆ ಮಾಡಲಾಯಿತು.

**ಕೃಪೆ : ವಿಜಯವಾಣಿ (ದಿನಾಂಕ ೨೪-೧೨-೨೦೧೨)**

## ಉಳ್ಳವರ ನಿರ್ಲಕ್ಷ್ಯದಿಂದ ನೊಂದವರನು ಬೀದಿಪಾಲು

ಜನಪ್ರತಿನಿಧಿಗಳು, ಅಧಿಕಾರಿಗಳು, ನೌಕರರು ಸಾಮಾನ್ಯ ಜನರ ಸಮಸ್ಯೆಗಳಿಗೆ ಪ್ರಾಮಾಣಿಕವಾಗಿ ಸ್ಪಂದಿಸುತ್ತಿಲ್ಲ. ಹೀಗಾಗಿ ಲಕ್ಷಾಂತರ ಮಂದಿ ಇಂದಿಗೂ ಸಹ ಅನ್ನ, ಬಟ್ಟೆ, ವಸತಿ ಇಲ್ಲದೆ ನರಳುತ್ತಿದ್ದಾರೆ. ಅಂತಹ ಜನರ ಕಣ್ಣೀರು ಒರೆಸಲು ಮಾನವೀಯತೆ ಬೇಕು ಎಂದು ಸಿದ್ಧಗಂಗಾ ಮಠಾಧೀಶರಾದ ಡಾ॥ ಶ್ರೀ ಶಿವಕುಮಾರ ಸ್ವಾಮೀಜಿ ಸಲಹೆ ನೀಡಿದರು.

ಸಿದ್ಧಗಂಗಾಮಠದ ಆವರಣದಲ್ಲಿ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ೫೫ನೇ ಮಹಾಧಿವೇಶನದಲ್ಲಿ ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪ, ವೈದ್ಯೆ ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿಗೆ ಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ, ಸರ್ವಸದಸ್ಯರ ಮಹಾ ಅಧಿವೇಶನದ ದಿವ್ಯಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು.

ಕಾಯಕವೇ ಕೈಲಾಸ, ಪ್ರತಿಯೊಬ್ಬರು ಬೆವರು ಸುರಿಸಿ ಅನ್ನ ತಿನ್ನಬೇಕು. ಕಾಯಕ ಮಾಡದೆ ಅನ್ನ ತಿನ್ನಲು ಹಕ್ಕು ಇಲ್ಲ. ಪ್ರಾಮಾಣಿಕತೆ ಮತ್ತು ತಾನು ಬಂದ ನೆಲೆಗಟ್ಟನ್ನು ನೆನಪಿಟ್ಟುಕೊಂಡು ಆತ್ಮವಿಮರ್ಶೆ ಮೂಲಕ ಸಮಾಜದ ಎಲ್ಲಾ ವರ್ಗಗಳ ಶೋಷಿತರ ಬದುಕನ್ನು ಹಸನುಗೊಳಿಸ ಬೇಕು ಎಂದರು.

ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗ ಸ್ವಾಮೀಜಿ ಸಾನ್ನಿಧ್ಯ ವಹಿಸಿ, ಕಾಯಕ, ದಾಸೋಹ, ಲಿಂಗ ಪೂಜೆ ಮೂಲಕ ಸಮಾಜವನ್ನು ಹಸನುಗಳಿಸುತ್ತಿರುವ ಶ್ರೀಗಳ ಬದುಕು ಎಲ್ಲರಿಗೂ ಆದರ್ಶ ಮತ್ತು ಅನುಕರಣೀಯ. ಸೇವೆ ಎಂಬ ಕಾಯಕವನ್ನು ಹೋರಾಟದ ಅಸ್ತ್ರವಾಗಿಟ್ಟು ಕೊಂಡಿರುವ ಅವರು ಸದಾ ಶೋಷಿತರು ಮತ್ತು ನಿರ್ಲ್ಯಕ್ಷಿತರ ಏಳಿಗೆ ಬಗ್ಗೆ ಚಿಂತನೆ ನಡೆಸುತ್ತಾರೆ ಎಂದರು. ಸರ್ವಸದಸ್ಯರ ಮಹಾಧಿವೇಶನವನ್ನುದ್ದೇಶಿಸಿ ಮುಖ್ಯಅತಿಥಿಗಳಾಗಿದ್ದ ಜಿಲ್ಲಾ ಪಂಚಾಯ್ತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಗೋವಿಂದರಾಜು ಮಾತನಾಡಿದರು. ತಾವು ಒಂದು ಬಿಡುಗಡೆ ಮಾಡಿದ ಎಲೆಮರೆಯ ಮಲ್ಲಿಗೆ ಎಂಬ ಕೃತಿಯನ್ನು ಶಿಕ್ಷಕರು, ವಿದ್ವಾನ್ ಬಿ.ಕೆ. ಲಿಂಗಯ್ಯ ಅವರ ಬದುಕನ್ನು ತಿಳಿಸುತ್ತದೆ. ಇಂತಹ ನೂರಾರು ಹಣತೆಗಳು ಶ್ರೀಗಳ ಕಾಯಕತತ್ವಕ್ಕೆ ಸಹಕಾರಿಯಾಗಿವೆ ಎಂದರು.

ವಿದ್ವಾನ್ ಎಲ್. ವಿರೂಪಾಕ್ಷಯ್ಯ, ವಿದ್ವಾನ್ ಎಚ್.ಟಿ. ಲಿಂಗಪ್ಪ, ವಿದ್ವಾನ್ ಬಿ.ಕೆ. ಲಿಂಗಯ್ಯ, ವಿದ್ವಾನ್ ಎಂ. ಮಲ್ಲವೀರಯ್ಯನವರಿಗೆ 'ಸಂಘಸಿರಿ' ಪ್ರಶಸ್ತಿಯನ್ನು ನೀಡಿ, ಶ್ರೀಗಳು ಹರಸಿದರು. ನಿವೃತ್ತ ಪೋಲೀಸ್ ಅಧಿಕಾರಿ ರೇವಣ ಸಿದ್ಧಯ್ಯ, ಹರಗುರುಚರಮೂರ್ತಿಗಳು ಉಪಸ್ಥಿತರಿದ್ದರು. ಈ ಸಂದರ್ಭದಲ್ಲಿ ಡಾ॥ ಪ್ರದೀಪ್‌ಕುಮಾರ್ ಹೆಬ್ರಿ ಬಸವಣ್ಣ ನವರನ್ನು ಕುರಿತು ರಚಿಸಿಸಿರುವ ೬ ಸಂಪುಟಗಳ ಯುಗಾವತಾರಿ ಮಹಾಕಾವ್ಯ, ಸಿ.ಬಿ. ತಿಲಕರಾಗಿ ಬರೆದಿರುವ ೧೦೮ ನಾಯಿ ಬೊಗಳಿದರೇನು, ಗುಜ್ಜಯ್ಯ ಬರೆದಿರುವ ಜ್ಞಾನಜ್ಯೋತಿ ಇತ್ಯಾದಿ ಪುಸ್ತಕಗಳನ್ನು ಶ್ರೀಗಳು ಬಿಡುಗಡೆ ಮಾಡಿದರು. ಡಾ॥ ಎಂ.ಎನ್. ಚನ್ನಬಸಪ್ಪ ಸ್ವಾಗತಿಸಿದರು. ಪಿ.ಎನ್. ಚಂದ್ರಶೇಖರಯ್ಯ ವಂದಿಸಿದರು.

**ಪಂಚಶಕ್ತಿ ಸ್ವರೂಪಿಗಳಿಂದ ನಿರ್ಲಕ್ಷ್ಯಿತರಿಗೆ ಕಾಯಕದೀಕ್ಷೆ**

ಲಿಂಗದೀಕ್ಷೆಗಿಂತ ಕಾಯಕದೀಕ್ಷೆಗೆ ಹೆಚ್ಚು ಮಹತ್ವ ನೀಡಿರುವ ಶ್ರೀಗಳು ಪಂಚಶಕ್ತಿ ಮೂಲಕ ಎಲ್ಲಾ ಜಾತಿಯ ನಿರ್ಲಕ್ಷಿತ ಮಕ್ಕಳಿಗೆ ಆಶ್ರಯದಾತರಾಗಿದ್ದಾರೆ ಎಂದು ಪ್ರಸಿದ್ಧ ವಿಮರ್ಶಕ, ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪ ಬಣ್ಣಿಸಿದರು.

ಸಿದ್ಧಗಂಗಾ ಮಠದ ಆವರಣದಲ್ಲಿ ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ೫೫ನೇ ಮಹಾಧಿವೇಶನದಲ್ಲಿ ಶಿವಕುಮಾರಶ್ರೀ ಪ್ರಶಸ್ತಿ ಸ್ವೀಕರಿಸಿ ಸನ್ಮಾನಿತರಾಗಿ ಮಾತನಾಡಿದರು.

ಶ್ರೀಗಳು ಪಂಚಶಕ್ತಿಯನ್ನು ಗಳಿಸಿಕೊಂಡು ಕ್ರಿಯಾಶೀಲ ಮತ್ತು ಜಾಗೃತ ಸ್ವರೂಪದಲ್ಲಿ ಮಠದ ಪರಂಪರೆಗೆ ದೊಡ್ಡ ಘನತೆ ತಂದುಕೊಟ್ಟಿದ್ದಾರೆ. ಸಮೂಹದ ಶಕ್ತಿಯಾಗಿರುವ ಶ್ರೀಗಳಿಗೆ ನಿಷ್ಠಾವಂತ ಕಾರ್ಯಪಡೆ ಬೇಕು ಎಂಬ ಇಚ್ಛೆ ಇದೆ. ಅಂತಹ ಪಡೆ ಸಿದ್ಧಗೊಂಡರೆ ಅವರಿಗೆ ನೆಮ್ಮದಿ. ಸುಖ ದೊರೆಯುತ್ತದೆ. ಕರ್ಪೂರದಂತೆ ಉರಿದು ಗಂಧದ ಕೊರಡಿನಂತೆ ತಮ್ಮನ್ನು ತಾವು ತೇಯ್ದುಕೊಂಡು ಗುಣಾತ್ಮಕ ಸಮಾಜವನ್ನು ಕಟ್ಟಿಕೊಡುವ ನಿರಂತರ ಪ್ರಯತ್ನದಲ್ಲಿದ್ದಾರೆ. ನನಗೆ ಶಿವಕುಮಾರಶ್ರೀ ಪ್ರಶಸ್ತಿಯನ್ನು ಯಾವ ಕಾರಣಕ್ಕೆ ಕೊಟ್ಟಿದ್ದಾರೋ ಗೊತ್ತಿಲ್ಲ. ಆದರೆ ಆ ಪ್ರಶಸ್ತಿಯನ್ನು ಆಶೀರ್ವಾದ ಎಂದು ಸ್ವೀಕರಿಸಿದ್ದೇನೆ ಎಂದರು.

ಶಿವಕುಮಾರಶ್ರೀ ಪ್ರಶಸ್ತಿಯನ್ನು ಸ್ವೀಕರಿಸಿ ಸನ್ಮಾನಿತ ರಾದ ಪ್ರಸಿದ್ಧ ಹೃದ್ರೋಗ ತಜ್ಞರಾದ ಡಾ॥ ವಿಜಯ ಲಕ್ಷ್ಮೀ ಬಾಳೇಕುಂದ್ರಿ ಮಾತನಾಡಿ, ಸತ್ಯಶುದ್ಧ ಕಾಯಕದಿಂದ ಸೇವೆ ಮಾಡಿದರೆ ಪ್ರಶಸ್ತಿ, ಭಾಗ್ಯಗಳು ಬರುತ್ತವೆ ಎನ್ನುವುದಕ್ಕೆ ತಾವೇ ಸಾಕ್ಷಿ. ಪ್ರಳಯದ ಭೀತಿಯನ್ನು ಸೃಷ್ಟಿಸಿ, ಮುಗ್ಧ ಜನರ ಬದುಕಿನಲ್ಲಿ ಆಟವಾಡುವ ಮೂರ್ಖರು ಇಂದು ನಮ್ಮ ನಡುವೆ ಇದ್ದಾರೆ. ಆದರೆ ಬದುಕಿನಲ್ಲಿ ಭೀತಿಗೊಂಡವರಿಗೆ ಅರಿವು ಮೂಡಿಸಿ, ಬದುಕನ್ನು ಕಟ್ಟಿಕೊಳ್ಳುವಂತೆ ಶ್ರೀಗಳು ಕಾಯಕತತ್ವದಿಂದಲೇ ಜ್ಞಾನಯೋಗವನ್ನು ಕರುಣಿಸುತ್ತಿದ್ದಾರೆ ಎಂದರು.

ಅತ್ಯಾಚಾರ, ಬಲಾತ್ಕಾರ, ಅನಾಚಾರ ಹೆಚ್ಚುತ್ತಿದ್ದು, ಶ್ರೀಗಳ ತತ್ವ ಮತ್ತು ಕಾಯಕವನ್ನು ಕಂಡು ಮನುಷ್ಯತ್ವದಿಂದ ವರ್ತಿಸಬೇಕು. ಪ್ರತಿಯೊಬ್ಬ ತಾಯಿ ಶ್ರೀಗಳಲ್ಲಿರುವ ತಾಯ್ತನ ಮತ್ತು ಮನುಷ್ಯತ್ವವನ್ನು ತಮ್ಮ ಮಕ್ಕಳಿಗೂ ಕಲಿಸಿಕೊಡ ಬೇಕು ಎಂದರು. ಜಿಪಂ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕೆ.ಎನ್. ಗೋವಿಂದರಾಜು, ನಿವೃತ್ತ ಪೊಲೀಸ್ ಅಧಿಕಾರಿ ರೇವಣಸಿದ್ಧಯ್ಯ ಮಾತನಾಡಿದರು. ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗಸ್ವಾಮೀಜಿ ದಿವ್ಯಸಾನ್ನಿಧ್ಯ ವಹಿಸಿದ್ದರು. ಸಿದ್ಧಗಂಗಾ ಮಠಾಧೀಶರಾದ ಡಾ॥ ಶ್ರೀ ಶಿವಕುಮಾರಸ್ವಾಮೀಜಿ ಪ್ರಶಸ್ತಿ ನೀಡಿ ಆಶೀರ್ವದಿಸಿದರು.

ಕೃಪೆ : ಸಂಯುಕ್ತ ಕರ್ನಾಟಕ (ದಿನಾಂಕ ೨೪-೧೨-೨೦೧೨)

## ಕಾಯಕದೀಕ್ಷೆಯ ಕ್ಷೇತ್ರ ಸಿದ್ಧಗಂಗೆ

ಸಿದ್ಧಗಂಗೆ ಲಿಂಗದೀಕ್ಷೆ ಮಠವಲ್ಲ, ಕಾಯಕ ದೀಕ್ಷೆ ಮಠ ಎಂದು ನಾಡೋಜ ಪ್ರೊ.ಕೆ.ಜಿ. ನಾಗರಾಜಪ್ಪ ಬಣ್ಣಿಸಿದರು. ಇಲ್ಲಿನ ಸಿದ್ಧಗಂಗಾಮಠದ ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆಯಲ್ಲಿ ಭಾನುವಾರ ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ೫೮ನೇ ಮಹಾಧಿವೇಶನ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಅವರು ಯಾರಿಗೆ ಬದುಕಲು ಸಾಧ್ಯವಿಲ್ಲ. ಸಮಾಜ, ಕುಟುಂಬದಿಂದ ವಂಚಿತನಾದವನು, ನಿರ್ಲಕ್ಷ್ಯಕ್ಕೊಳಗಾದ ವ್ಯಕ್ತಿಗಳು, ವಿದ್ಯಾರ್ಥಿಗಳಿಗೆ ಆಶ್ರಯ ಕೊಟ್ಟು ಸಾಮರ್ಥ್ಯ ರೂಪಿಸಿಕೊಳ್ಳುವ ಶಕ್ತಿಯನ್ನು ಸಿದ್ಧಗಂಗೆ ಕರುಣಿಸಿದೆ. ಕನಿಷ್ಠ ಸಾಮರ್ಥ್ಯವುಳ್ಳ ವ್ಯಕ್ತಿಯನ್ನು ಗರಿಷ್ಠ ಶಕ್ತಿಯನ್ನಾಗಿ ರೂಪಿಸಿದ್ದು ಶ್ರೀಮಠ ಎಂದು ಹೇಳಿದರು.

ನಾಡಿನಲ್ಲಿ ಸಾವಿರಾರು ಮಠಗಳಿವೆ. ಸಾಕಷ್ಟು ಮಠ ಗಳು ಅಳಿಸಿ ಹೋಗಿವೆ. ಈ ಎಲ್ಲಾ ಮಠಗಳಿಗಿಂತ ಭಿನ್ನ ವಿಶಿಷ್ಟ ಸಾಲಿನಲ್ಲಿ ಶ್ರೀ ಸಿದ್ಧಗಂಗಾ ಮಠ ನಿಲ್ಲುತ್ತದೆ. ವೀರಶೈವ ಸಮುದಾಯದ ಗುರು, ವಿರಕ್ತ ಪರಂಪರೆಯ ಸಂಘರ್ಷಕ್ಕೆ ಸಿಲುಕದೆ ಈ ಮಠ ಸೇವೆಯೇ ನಮ್ಮ ಪರಂಪರೆ ಎಂದು ಭಾವಿಸಿದೆ. ನಂದದ ಒಲೆ, ಬೆಟ್ಟದ ಮೇಲಿಗೆ ಗಂಗೆ, ಹಳೆಯ ಮಠ, ಯಂತ್ರ ಕಟ್ಟುವ ಮಂಚ ಹಾಗೂ ಉದ್ದಾನಶ್ರೀಗಳ ಪವಾಡ ಸಿದ್ಧಗಂಗೆಯಲ್ಲಿನ ಪಂಚಶಕ್ತಿಗಳು. ಶ್ರೀಮಠವು ಪಂಚಶಕ್ತಿ ಕೇಂದ್ರವಾಗಿರುವುದರಿಂದ ಗುರು, ವಿರಕ್ತ ಸಂಘರ್ಷಕ್ಕೆ ಇಲ್ಲಿ ಆಸ್ಪದವಾಗಿಲ್ಲ ಎಂದು ಸ್ಪಷ್ಟಪಡಿಸಿದರು. ಪಂಚಶಕ್ತಿಗಳ ಸಮ್ಮಿಲನ ಸಾಕರಾ ಜಾಗೃತಿಸ್ವರೂಪವೇ ಸಿದ್ಧಗಂಗಾ ಶ್ರೀಗಳೆಂದು ಬಣ್ಣಿಸಿದ ಅವರು ಶ್ರೀಗಳು ವ್ಯಕ್ತಿ ಯಲ್ಲ, ಶಕ್ತಿ ಎಂದು ನುಡಿದರು.

ಮತ್ತೊಬ್ಬ ಪ್ರಶಸ್ತಿ ಪುರಸ್ಕೃತೆ ಮಕ್ಕಳ ಹೃದ್ರೋಗ ತಜ್ಞೆ ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿ ಮಾತನಾಡಿ ಸತ್ಯ, ಶುದ್ಧ, ಕಾಯಕಕ್ಕೆ ಮತ್ತೊಂದು ಹೆಸರೇ ಸಿದ್ಧಗಂಗೆ. ೧೦೫ನೇ ವಯಸ್ಸಿನಲ್ಲೂ ತಮ್ಮ ಕಾಯಕ ನಿಷ್ಠೆಯನ್ನು ಮೆರೆದವರು ಶ್ರೀಗಳು, ಜಾತಿ, ಧರ್ಮ ಮೀರಿ ಬೆಳೆದ ಮಠ ಇದಾಗಿದೆ ಎಂದು ಬಣ್ಣಿಸಿದರು.

ಸಾನ್ನಿಧ್ಯ ವಹಿಸಿದ್ದ ಡಾ॥ ಶ್ರೀ ಶಿವಕುಮಾರಸ್ವಾಮೀಜಿ ಆಶೀರ್ವಚನ ನೀಡಿ, ಹೊಟ್ಟೆಗೆ ಅನ್ನವಿಲ್ಲ, ಮೈತುಂಬ ಬಟ್ಟೆಯಿಲ್ಲ, ವಾಸ ಮಾಡುವುದಕ್ಕೆ ಸೂರಿಲ್ಲ, ಇಂತಹ ಸಮಾಜ ದಲ್ಲಿ ನಾವು ಬದುಕುತ್ತಿದ್ದೇವೆ. ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಿತರನ್ನು ಮೇಲೆತ್ತಲು ಅಧಿಕಾರಿಗಳು, ಸರ್ಕಾರಿ ನೌಕರರು ನಿಷ್ಠಾಪೂರ್ವಕವಾಗಿ, ಶ್ರದ್ಧಾಪೂರ್ವಕ ವಾಗಿ ತಮ್ಮ ಕಾಯಕವನ್ನು ಮಾಡಬೇಕು ಎಂದು ಕರೆ ನೀಡಿದರು.

**ಸಂಘಸಿರಿ ಪ್ರಶಸ್ತಿ ಪ್ರದಾನ :**

ಸಮಾರಂಭದಲ್ಲಿ ನಾನಾ ಕ್ಷೇತ್ರದ ಸಾಧಕರಾದ ಎಲ್. ವಿರೂಪಾಕ್ಷಯ್ಯ, ಎಂ. ಮಲ್ಲವೀರಯ್ಯ, ಬಿ.ಕೆ. ಲಿಂಗಯ್ಯ, ಎಚ್.ಟಿ. ಲಿಂಗಯ್ಯನವರಿಗೆ 'ಸಂಘಸಿರಿ' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಯುಗಾವತಾರಿ, ಎಲೆಮರೆಕಾಯಿ ಸೇರಿ ದಂತೆ ನಾಲ್ಕು ಕೃತಿಗಳು ಈ ಸಂದರ್ಭದಲ್ಲಿ ಬಿಡುಗಡೆ ಮಾಡಲಾಯಿತು. ಸಿದ್ಧಗಂಗಾಮಠಾಧ್ಯಕ್ಷ ಶ್ರೀ ಸಿದ್ಧಲಿಂಗ ಸ್ವಾಮೀಜಿ, ಜಿಲ್ಲಾ ಪಂಚಾಯಿತಿ ಸಿಇಓ ಗೋವಿಂದರಾಜು, ನಿವೃತ್ತ ಪೊಲೀಸ್ ಮಹಾನಿರ್ದೇಶಕ ಎಲ್. ರೇವಣಸಿದ್ಧಯ್ಯ, ಹಳೆಯ ವಿದ್ಯಾರ್ಥಿಗಳ ಸಂಘದ ಕೆ.ಹೆಚ್. ಶಿವರುದ್ರಯ್ಯ, ರೇಣುಕಾರಾಧ್ಯ ಮತ್ತಿತರರು ಉಪಸ್ಥಿತರಿದ್ದರು.

ಕೃಪೆ : ವಿಜಯಕರ್ನಾಟಕ (ದಿನಾಂಕ ೨೪-೧೨-೨೦೧೨)

## ಶೋಷಿತರ ಕೈ ಹಿಡಿದೆತ್ತಿ : ಸ್ವಾಮೀಜಿ ಸಲಹೆ

ಇಂದಿಗೂ ಹೊಟ್ಟೆಗೆ ಅನ್ನವಿಲ್ಲದೆ, ಮೈತುಂಬ ಬಟ್ಟೆ ಯಿಲ್ಲದೆ, ವಾಸಕ್ಕೆ ಸೂರಿಲ್ಲದೆ ಬದುಕುವವರು ಈ ಸಮಾಜ ದಲ್ಲಿದ್ದಾರೆ. ಸಾಮಾಜಿಕ, ಆರ್ಥಿಕವಾಗಿ ಶೋಷಿತ ರಾದವರನ್ನು ಕೈಹಿಡಿದು ಮೇಲೆತ್ತಲು ಅಧಿಕಾರಿಗಳು, ಸರ್ಕಾರಿ ನೌಕರರು,

ಜವಾಬ್ದಾರಿಯುತ ಸ್ಥಾನದಲ್ಲಿರುವವರು ನಿಷ್ಠೆಯಿಂದ ತಮ್ಮ ಕಾಯಕ ಮಾಡಬೇಕು ಎಂದು ಡಾ॥ ಶ್ರೀ ಶಿವಕುಮಾರ ಸ್ವಾಮೀಜಿ ಭಾನುವಾರ ಇಲ್ಲಿ ಸಲಹೆ ನೀಡಿದರು. ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ೫೮ನೇ ಮಹಾಧಿವೇಶನ ಹಾಗೂ ಪಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಪ್ರೊ.ಕೆ.ಜಿ. ನಾಗರಾಜಪ್ಪ, ಪ್ರತಿನಿತ್ಯ ಸಾವಿರಾರು ಜನಕ್ಕೆ ಊಟಕ್ಕೆ ಇಕ್ಕುತ್ತಿರುವ ಮಠದ ಒಲೆ, ಬೆಟ್ಟದ ಮೇಲಿರುವ ಗಂಗೆ, ಉದ್ದಾನ ಸ್ವಾಮೀಜಿಗಳ ಪವಾಡ ಹಾಗೂ ಯಂತ್ರ ಕಟ್ಟುವ ಮಂಚ ಶ್ರೀ ಸಿದ್ಧಗಂಗಾ ಮಠದ ಶಕ್ತಿಗಳು ಎಂದು ಅಭಿಪ್ರಾಯಪಟ್ಟರು.

ಸಿದ್ಧಗಂಗಾ ಮಠ ಧಾರ್ಮಿಕ ಕಾರ್ಯಕ್ರಮಗಳಿಗೆ ಮಾತ್ರ ಮೀಸಲಾದುದಲ್ಲ. ಕಾಯಕವೇ ಇಲ್ಲಿನ ಮಂತ್ರ. ಆದ್ದರಿಂದಲೇ ಸಮಾಜದಿಂದ ನಿರ್ಲಕ್ಷ್ಯಕ್ಕೊಳಗಾದ, ಕುಟುಂಬದಿಂದ ದೂರವಾದ ಸಾವಿರಾರು ಮಕ್ಕಳು ಇಲ್ಲಿ ವಿದ್ಯೆ ಕಲಿತು ಬದುಕು ರೂಪಿಸಿಕೊಳ್ಳಲು ಸಾಧ್ಯವಾಗಿದೆ ಎಂದರು.

ಇದೆಲ್ಲ ಒಬ್ಬ ವ್ಯಕ್ತಿಯಿಂದ ಸಾಧ್ಯವಾಗುವುದಲ್ಲ. ಶ್ರೀ ಶಿವಕುಮಾರಸ್ವಾಮೀಜಿಗಳು ಒಂದು ಶಕ್ತಿ, ಸಮಾಜದ ಬಗ್ಗೆ ಅವರಿಗಿರುವ ಅದಮ್ಯ ಕಾಳಜಿ ಇದನ್ನು ಸಾಧ್ಯವಾಗಿಸಿದೆ. ನಾಡಿನ ಉಳಿದೆಲ್ಲ ಮಠಗಳಿಗಿಂತ ಸಿದ್ಧಗಂಗಾಮಠ ಪ್ರತ್ಯೇಕವಾಗಿ ನಿಲ್ಲುತ್ತದೆ. ಗುರು ಹಾಗೂ ವಿರಕ್ತ ಸಂಘರ್ಷ ಇಲ್ಲಿ ಉದ್ಭವವಿಲ್ಲ ಎಂದರು.

ಸತ್ಯ, ಶುದ್ಧ ಹಾಗೂ ಕಾಯಕಕ್ಕೆ ಮೂರ್ತರೂಪ ದಂತೆ ಸಿದ್ಧಗಂಗೆ ಮಠವು ನಮ್ಮೆದುರಿಗಿದೆ. ಕಾಯಕ ಎಂಬಂತೆ ಭಾವಿಸಿ ಈಗಲೂ ಶ್ರಮಿಸುತ್ತಿದ್ದಾರೆ. ಎಲ್ಲ ಜಾತಿ, ಧರ್ಮವನ್ನು ಮೀರಿದ್ದು ಸಿದ್ಧಗಂಗಾಮಠ ಎಂದು 'ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿ ಸ್ವೀಕರಿಸಿದ ಮಕ್ಕಳ ಹೃದಯ ತಜ್ಞೆ ವಿಜಯಲಕ್ಷ್ಮಿ ಬಾಳೇಕುಂದ್ರಿ ಹೇಳಿದರು.

ಎಲ್. ವಿರೂಪಾಕ್ಷಯ್ಯ, ಎಂ. ಮಲ್ಲವೀರಯ್ಯ, ಬಿ.ಕೆ. ಲಿಂಗಯ್ಯ, ಎಚ್.ಟಿ. ಲಿಂಗಪ್ಪ ಅವರಿಗೆ ಸಂಘಸಿರಿ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಯುಗಾವತಾರಿ, ಎಲೆಮರೆ ಕಾಯಿ ಸೇರಿದಂತೆ ನಾಲ್ಕು ಕೃತಿಯನ್ನು ಬಿಡುಗಡೆ ಮಾಡಲಾಯಿತು. ಸಿದ್ಧಲಿಂಗಸ್ವಾಮೀಜಿ, ಜಿಲ್ಲಾ ಪಂಚಾಯಿತಿ ಸಿಇಒ ಗೋವಿಂದ ರಾಜು, ನಿವೃತ್ತ ಪೊಲೀಸ್ ಮಹಾನಿರ್ದೇಶಕ ಎಲ್. ರೇವಣ ಸಿದ್ಧಯ್ಯ ಮತ್ತಿತರರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಕೃಪೆ : ಪ್ರಜಾವಾಣಿ (ದಿನಾಂಕ ೨೪-೧೨-೨೦೧೨)

## ಸಿದ್ಧಗಂಗಾ ಕ್ಷೇತ್ರಕ್ಕಿದೆ ಭಿನ್ನ ಭಾವ ನೆಲೆ

### ಇತರೆ ಮಠಗಳಿಗಿಂತ ಸಿದ್ಧಗಂಗಾ ಮಠ ಭಿನ್ನ : ನಾಡೋಜ ಪ್ರೊ.ಕೆ.ಜಿ. ನಾಗರಾಜಪ್ಪ

ಶ್ರೀ ಸಿದ್ಧಗಂಗಾಮಠದ ಪವಾಡ ಎಂತಹವರನ್ನೂ ಮಂತ್ರಮುಗ್ಧರನ್ನಾಗಿಸುತ್ತದೆ. ಇಲ್ಲಿ ಎಂದೂ ನಂದದ ಒಲೆ, ಬೆಟ್ಟದ ಮೇಲಿನ ಗಂಗೆ, ಹಳೆಯ ಮಠ, ಯಂತ್ರ ಕಟ್ಟುವ ಮಂಚ, ಉದ್ದಾನ ಶ್ರೀಗಳ ಪವಾಡ ಶ್ರೀಕ್ಷೇತ್ರದ ವೈಶಿಷ್ಟ್ಯವಾಗಿದೆ. ಇದೊಂದು ಪಂಚಶಕ್ತಿ ಕೇಂದ್ರ ಎಂದು ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪ ಬಣ್ಣಿಸಿದರು.

ಅವರು ಶ್ರೀಕ್ಷೇತ್ರ ಸಿದ್ಧಗಂಗಾ ಮಠದ ಗೋಸಲ ಶ್ರೀ ಸಿದ್ಧೇಶ್ವರ ವೇದಿಕೆಯಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ವತಿಯಿಂದ ಭಾನುವಾರ ಏರ್ಪಡಿಸಿದ್ದ ಸಂಘದ ಸರ್ವಸದಸ್ಯರ ೫೮ನೇ ಮಹಾಧಿವೇಶನ ಹಾಗೂ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಸ್ವೀಕರಿಸಿ ಮಾತನಾಡುತ್ತಿದ್ದರು.

ಪಂಚಶಕ್ತಿಗಳ ಸಮ್ಮಿಲನ ಸಾಕಾರ ಜಾಗೃತಿ ಸ್ವರೂಪವೇ ಸಿದ್ಧಗಂಗಾ ಶ್ರೀಗಳು. ಶ್ರೀ ಶಿವಕುಮಾರ ಸ್ವಾಮೀಜಿಗಳು ವ್ಯಕ್ತಿಯಲ್ಲ, ಮಹಾನ್‌ಶಕ್ತಿ. ಶ್ರೀಗಳು ಸಮೂಹ, ಸಮಾಜ, ಶ್ರೀಗಳಿಗೆ ಸಮಾಜದೆಡೆಗೆ ಅಪಾರ ಕಳಕಳಿ ಮತ್ತು ಅವರಲ್ಲಿ ನೋವು ಕಾಣಬಹುದು. ಆ ಶಕ್ತಿ, ಸಮೂಹದ ಅನುಗುಣವಾಗಿ ನಿಷ್ಠಾವಂತ ಕಾರ್ಯಪಡೆ ಸಿದ್ಧಪಡಿಸಬೇಕೆಂಬ ನಮ್ಮ ಆಸೆ ಶ್ರೀಗಳದ್ದಾಗಿದೆ. ಶ್ರೀಗಳ ಈ ಇಚ್ಛೆ ಅವರಿಗೆ ನೆಮ್ಮದಿ, ಸುಖ ತಂದು ಕೊಡಲಿದೆ ಎಂದರು.

ಕಾರ್ಯಕ್ರಮದಲ್ಲಿ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಪಡೆದ ಮಕ್ಕಳ ಹೃದಯ ತಜ್ಞೆ ಡಾ॥ ವಿಜಯಲಕ್ಷ್ಮಿ ಬಾಳೇಕುಂದ್ರಿ ಮಾತನಾಡಿ, ೧೦೫ನೇ ವಯಸ್ಸಿನಲ್ಲೂ ತಮ್ಮ ಕಾಯಕ ನಿಷ್ಠೆಯನ್ನು ಮೆರೆದವರು ಶ್ರೀ ಶಿವಕುಮಾರ ಸ್ವಾಮೀಜಿ ಜಾತಿ, ಧರ್ಮ ಮೀರಿ ಬೆಳೆದ ಮಠ ಇದಾಗಿದೆ ಎಂದು ತಿಳಿಸಿದರು. ಕಾರ್ಯಕ್ರಮದ ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀ ಸಿದ್ಧಗಂಗಾಮಠದ ಡಾ॥ ಶ್ರೀ ಶಿವಕುಮಾರ ಸ್ವಾಮೀಜಿ ಮಾತನಾಡಿ ಹೊಟ್ಟೆಗೆ ಅನ್ನವಿಲ್ಲ, ಮೈತುಂಬ ಬಟ್ಟೆಯಿಲ್ಲ, ವಾಸ ಮಾಡುವುದಕ್ಕೆ ಸೂರಿಲ್ಲ. ಇಂತಹ ಸಮಾಜದಲ್ಲಿ ನಾವು ಬದುಕುತ್ತಿದ್ದೇವೆ ಎಂದು ಕಳವಳ ವ್ಯಕ್ತಪಡಿಸಿದರು. ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗಸ್ವಾಮೀಜಿ ಮಾತನಾಡಿ, ಶ್ರೀಮಠ ಈ ಹಿಂದೆ ಎಲ್ಲಾ ವಿದ್ಯಾರ್ಥಿಗಳು ಅದನ್ನೇ ಮಹಾಪ್ರಸಾದ ಎಂದು ಸ್ವೀಕರಿಸಿ ಉತ್ತಮ ದಾರಿಯತ್ತ ಮುನ್ನಡೆದಿದ್ದೀರಿ, ಶ್ರೀಮಠದಲ್ಲಿ ವಿದ್ಯಾಭ್ಯಾಸ ಮಾಡಿ ಹೊರ ಹೋಗಿರುವ ಅವರನ್ನು ಅಷ್ಟೇ ಪ್ರೀತಿ ಅಕ್ಕರೆಯಿಂದ ನೋಡಿಕೊಳ್ಳುವುದು ಅಷ್ಟೇ ಮುಖ್ಯವಾಗಿದೆ ಎಂದರು.

ಕೃಪೆ : ಉದಯವಾಣಿ (ದಿನಾಂಕ ೨೪-೧೨-೨೦೧೨)



## ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ 58ನೇ ವಾರ್ಷಿಕ ಮಹಾಧಿವೇಶನ


ಪರಮಪೂಜ್ಯ ಶ್ರೀಗಳವರಿಂದ ಶಿವನುಡಿ


ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಭಕ್ತಿ ನಮನ


ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪನವರಿಂದ ಕೃತಜ್ಞತಾ ನುಡಿ


ಶ್ರೀಮತಿ ವಿಜಯಲಕ್ಷ್ಮೀ ಬಾಳೇಕುಂದ್ರಿಯವರಿಂದ ಕೃತಜ್ಞತಾ ನುಡಿ


ಶ್ರೀ ಎಂ.ಎನ್. ಚನ್ನಬಸಪ್ಪನವರಿಂದ ಸ್ವಾಗತ


ಶ್ರೀ ಎಲ್. ರೇವಣಸಿದ್ಧಯ್ಯನವರಿಂದ ನುಡಿನಮನ


ಶ್ರೀ ಗೋವಿಂದರಾಜು ಅವರಿಂದ ನುಡಿನಮನ


ಶ್ರೀ ಕೆ.ಹೆಚ್. ಶಿವರುದ್ರಯ್ಯನವರಿಂದ ಸಂಘದ ವಾರ್ಷಿಕ ವರದಿ ಮಂಡನೆ


ಶ್ರೀ ಗಂಗಾಧರಯ್ಯನವರಿಂದ ಕೃಷಿ ಮತ್ತು ಕೈಗಾರಿಕ ವಸ್ತು ಪ್ರದರ್ಶನದ ವಾರ್ಷಿಕ ವರದಿ ಮಂಡನೆ


ಶ್ರೀ ಹೆಚ್.ಬಿ. ಗಂಗಾಧರಯ್ಯನವರಿಂದ ಸಿದ್ಧಗಂಗಾ ಮಾಸಪತ್ರಿಕೆ ವಾರ್ಷಿಕ ವರದಿ ಮಂಡನೆ


ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಸಂಪಾದಿಸಿದ 'ಎಲೆಮರೆಯ ಮಲ್ಲಿಗೆ' ಕೃತಿ ಲೋಕಾರ್ಪಣೆ


ಡಾ. ಪ್ರದೀಪ ಹೆಬ್ರಿಯವರು ರಚಿಸಿದ 'ಯುಗಾವತಾರಿ ಬಸವಣ್ಣ' ಕೃತಿ ಲೋಕಾರ್ಪಣೆ


ಸಿದ್ಧಗಂಗ ಶಿವಕುಮಾರಶ್ರೀ ಪ್ರಶಸ್ತಿ ಪ್ರಾಯೋಜಕರಾದ ಶ್ರೀಮತಿ ಶಕುಂತಲ ಜಯದೇವ್ ಅವರಿಗೆ ಆಶೀರ್ವಾದ


ಸಿದ್ಧಗಂಗಾ ಮಾಸಪತ್ರಿಕೆಗೆ 500 ಜನ ಚಂ[illegible]ರರನ್ನು ಮಾಡಿಸಿದ ಶ್ರೀ ತೀರ್ಥಪ್ಪನವರಿಗೆ ಆಶೀ[illegible]ರ್ವಾದ


ಮಹಾಧಿವೇಶನದಲ್ಲಿ ಭಾಗವಹಿಸಿದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು

RNI No. 17139/69 "Siddaganga" Monthly - Postal Reg. No. KA/SK/TMR/385/2009-11

## ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೫೮ನೇ ವಾರ್ಷಿಕ ಮಹಾಧಿವೇಶನ

## 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪುರಸ್ಕೃತರು



ನಾಡೋಜ ಪ್ರೊ. ಕೆ.ಜಿ. ನಾಗರಾಜಪ್ಪನವರು



ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿಯವರು

## 'ಸಂಘಶ್ರೀ' ಪ್ರಶಸ್ತಿ ಪುರಸ್ಕೃತರು



ವಿದ್ವಾನ್ ಶ್ರೀ ಎಲ್. ವಿರೂಪಾಕ್ಷಯ್ಯನವರು




ವಿದ್ವಾನ್ ಶ್ರೀ ಮಲ್ಲವೀರಯ್ಯನವರು



ವಿದ್ವಾನ್ ಶ್ರೀ ಬಿ.ಕೆ. ಲಿಂಗಯ್ಯನವರು



ವಿದ್ವಾನ್ ಶ್ರೀ ಹೆಚ್.ಟಿ. ಲಿಂಗಪ್ಪನವರು

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru 10.